1




# ಹಿಂಗಾರ

ತ್ರೈಮಾಸಿಕ



ಕಾರ್ತಿಂಗ
ಆಟಿ ತಿಂಗ
ಸೋಣ ತಿಂಗ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




ವಿದ್ವಾಂಸರ ವಿಚಾರ ಸಂಕಿರಣ ಕಾರ್ಯಕ್ರಮ ದಿನಾಂಕ 08.09.2014 ಅಕಾಡೆಮಿ ಕಚೇರಿ, ಮಡಿಕೇರಿ




ದಿನಾಂಕ 17.04.2015 ಅರೆಭಾಷೆ ಸಂಸ್ಕೃತಿ ಕುರಿತಾಗಿ ಚಿತ್ರಕಲಾ ಶಿಬಿರ, ಕನಕಮಜಲು




ದಿನಾಂಕ 22.02.2015 ಸಾಂಸ್ಕೃತಿಕ ಸಮಾವೇಶ, ಕೊಡಗು ಮತ್ತೆ ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರು



# ಹಿಂಗಾರ



ಕರ್ನಾಟಕ
ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ಪ್ರಧಾನ ಸಂಪಾದಕರ್
**ಕೊಲ್ಯದ ಗಿರೀಶ್**

ಸಂಪಾದಕರ್
**ಡಾ. ಪೂವಪ್ಪ ಕಣಿಯೂರು**
**ಕುಡೆಕಲ್ ಸಂತೋಷ್**

ವ್ಯವಸ್ಥಾಪಕ ಸಂಪಾದಕರ್
**ಉಮರಬ್ಬ**

| | |
|---|---|
| **HINGARA** | **ಹಿಂಗಾರ** |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka** | **ಕರ್ನಾಟಕ** |
| **Arebhasa Culture and** | **ಅರೆಬಾಸೆ ಸಂಸ್ಕೃತಿ ಮತ್ತು** |
| **Sahitya Academy** | **ಸಾಹಿತ್ಯ ಅಕಾಡೆಮಿ** |
| Coffee Kripa, Ist Floor | ಕಾಫಿಕೃಪಾ, ಒಂದನೇ ಮಹಡಿ, |
| Rajaseat Road | ರಾಜಾಸೀಟ್ ರಸ್ತೆ |
| Madikeri- 571201 | ಮಡಿಕೇರಿ -೫೭೧ ೨೦೧ |
| Ph: 08272 - 223055 | ದೂರವಾಣಿ : ೦೮೨೭೨ - ೨೨೩೦೫೫ |
| arebaseacademy@gmail.com | arebaseacademy@gmail.com |
| www.arebaseacademy.com | www.arebaseacademy.com |
| Chief Editor : | ಪ್ರಧಾನ ಸಂಪಾದಕರ್ |
| **Kolyda Girish** | **ಕೊಲ್ಯದ ಗಿರೀಶ್** |
| Editor's : | ಸಂಪಾದಕರ್ |
| **Dr. Poovappa Kaniyoor** | **ಡಾ. ಪೂವಪ್ಪ ಕಣಿಯೂರು** |
| **Kudekal Santhosh** | **ಕುಡೆಕಲ್ ಸಂತೋಷ್** |
| Managing Editor : | ವ್ಯವಸ್ಥಾಪಕ ಸಂಪಾದಕರ್ |
| **Umarabba** | **ಉಮರಬ್ಬ** |
| Cover Design : | ಮುಖಪುಟ ವಿನ್ಯಾಸ |
| **Mohan Sona** | **ಮೋಹನ ಸೋನ** |
| Printed at : | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Pages : 68 | ಪುಟಗಳು : ೬೮ |
| Vol. : 1-1 | ಸಂಪುಟ ೧ ಸಂಚಿಕೆ ೧ |
| Period :June To August | ಜೂನ್-ಆಗಸ್ಟ್ |
| Price :Rs. 20 | ಬೆಲೆ : ರೂ. ೨೦ |
| 3 year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. ೨೦೦ |



**ಡಿ.ವಿ.ಸದಾನಂದ ಗೌಡ**
ಸನ್ಮಾನ್ಯ ಸಚಿವರು
ಕೇಂದ್ರ ಕಾನೂನು ಮತ್ತು
ಸಂಸದೀಯ ವ್ಯವಹಾರಗಳ ಇಲಾಖೆ
ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು

## ಸಂದೇಶ

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಗೌಡ ಜನಾಂಗ ಬಾಂಧವರ ಕನಸು ನನಸಾಗಿದೆ. ಅರೆಭಾಷೆ ಸಂಸ್ಕೃತಿ, ಸಾಹಿತ್ಯವನ್ನು ಉಳಿಸಿ ಬೆಳೆಸುವ ಸಲುವಾಗಿ ಕರ್ನಾಟಕ ಸರಕಾರ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯನ್ನು ರಚನೆ ಮಾಡಿದೆ. ಅಕಾಡೆಮಿ ಉತ್ತಮ ಕೆಲಸ-ಕಾರ್ಯಗಳನ್ನು ಹಮ್ಮಿಕೊಳ್ಳುತ್ತ ಅರೆಭಾಷೆ ಸಂಸ್ಕೃತಿ, ಸಾಹಿತ್ಯಕ್ಕೆ ಕೊಡುಗೆ ನೀಡಲಿ, ಈ ಸಂಬಂಧ ಅಕಾಡೆಮಿ ವತಿಯಿಂದ ಹೊರತರಲಾಗುತ್ತಿರುವ "ಹಿಂಗಾರ" ತ್ರೈಮಾಸಿಕ ಪತ್ರಿಕೆ ಅರೆಭಾಷೆ ವಿಚಾರಧಾರೆಗಳನ್ನು ನಾಡಿನ ಜನತೆಗೆ ಪರಿಚಯಿಸುವಂತಾಗಲಿ, ಪತ್ರಿಕೆ ಉತ್ತಮವಾಗಿ ಮೂಡಿಬರಲಿ ಎಂದು ಶುಭ ಹಾರೈಸುತ್ತೇನೆ.

ಅಕ್ಟೋಬರ್, 2015 **ಡಿ.ವಿ.ಸದಾನಂದ ಗೌಡ**




**ಉಮಾಶ್ರೀ**
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ,
ವಿಕಲಚೇತನರ ಮತ್ತು
ಹಿರಿಯ ನಾಗರಿಕರ ಸಬಲೀಕರಣ,
ಕನ್ನಡ ಮತ್ತು ಸಂಸ್ಕೃತಿ ಸಚಿವರು





ದೂರವಾಣಿ : ಕಛೇರಿ : 22255282
22033469
ಕೊಠಡಿ ಸಂಖ್ಯೆ : 252, 2ನೇ ಮಹಡಿ
ವಿಧಾನ ಸೌಧ, ಬೆಂಗಳೂರು


ಸಂ: ಮ.ಮ.ಅ.ಕ.ಸಂ.ಸ/ /2015

ದಿನಾಂಕ: 21-8-2015

" ಶುಭ ಸಂದೇಶ "

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯು "ಹಿಂಗಾರ" ಎಂಬ ತ್ರೈಮಾಸಿಕ ಪತ್ರಿಕೆಯನ್ನು ಹೊರತರುವುದು ಸಂತೋಷಕರ ವಿಷಯ. ಉತ್ತಮ ಕಾರ್ಯಕ್ರಮಗಳನ್ನು ಅಕಾಡೆಮಿಯಿಂದ ಹಮ್ಮಿಕೊಳ್ಳುವುದರೊಂದಿಗೆ "ಹಿಂಗಾರ" ತ್ರೈಮಾಸಿಕ ಪತ್ರಿಕೆಯಲ್ಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ, ಕಲೆ, ಭಾಷೆಗಳನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಲೇಖನಗಳು ನಾಡಿನ ಜನತೆಗೆ ಮನಮುಟ್ಟುವಂತೆ ಹೊರಹೊಮ್ಮಲಿ, ಪತ್ರಿಕೆಯು ಪ್ರಸಿದ್ಧಿ ಪಡೆಯುವಲ್ಲಿ ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ.

(ಉಮಾಶ್ರೀ)



**ಕೆ.ಜಿ.ಬೋಪಯ್ಯ**
ಸನ್ಮಾನ್ಯ ಶಾಸಕರು, ಮಾಜಿ ಸಭಾಧ್ಯಕ್ಷರು
ಶಾಸಕರ ಭವನ ಕೊಠಡಿ : 289
ವಿರಾಜಪೇಟೆ ಮತಕ್ಷೇತ್ರ, ಕೊಡಗು
ದೂರವಾಣಿ: 08272–222878

ಕ್ರ.ಸಂ:ವಿಸ:ಕಸ:2014–15 ದಿನಾಂಕ : 20.08.2015

# ಸಂದೇಶ

ಗೌಡ ಜನಾಂಗದ ಬಹುದಿನಗಳ ಬೇಡಿಕೆಯಾಗಿದ್ದ, ಅರೆಭಾಷೆ ಸಂಸ್ಕೃತಿ, ಸಾಹಿತ್ಯ ಪದ್ಧತಿಗಳನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಅಗತ್ಯವಿದ್ದ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ರಚನೆಯಾಗಿರುವುದು ಸಂತೋಷದ ವಿಷಯ. ಘನವೆತ್ತ ಕರ್ನಾಟಕ ಸರ್ಕಾರ ಅಕಾಡೆಮಿ ರಚನೆಯೊಂದಿಗೆ ಅರೆಭಾಷೆ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡುತ್ತಿದೆ.

ಅಕಾಡೆಮಿ ವತಿಯಿಂದ ಅರೆಭಾಷೆ ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದಂತೆ ವಿಚಾರಧಾರೆಗಳನ್ನು ಜನತೆಗೆ ತಲುಪಿಸುವ ನಿಟ್ಟಿನಲ್ಲಿ ಪ್ರಕಟಗೊಳ್ಳುತ್ತಿರುವ "ಹಿಂಗಾರ" ತ್ರೈಮಾಸಿಕ ಸಂಚಿಕೆ ಉತ್ತಮವಾಗಿ ಮೂಡಿಬರಲಿ, ಆಚಾರ–ವಿಚಾರಗಳ ಬಗ್ಗೆ ಬೆಳಕು ಚೆಲ್ಲುತ್ತಾ ಜನಾಂಗ ಬಾಂಧವರಿಗೆ ಉಪಯುಕ್ತವಾಗಲಿ.



ಎಂ.ಪಿ.ಅಪ್ಪಚ್ಚುರಂಜನ್
ಶಾಸಕರು, ಮಡಿಕೇರಿ ಮತಕ್ಷೇತ್ರ

ದಿನಾಂಕ 25.08.2015

# ಶುಭ ಸಂದೇಶ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯನ್ನು ಸರ್ಕಾರವು ಸ್ಥಾಪಿಸಿದ್ದು, ಈ ಅಕಾಡೆಮಿ ವತಿಯಿಂದ ತ್ರೈಮಾಸಿಕ ಪತ್ರಿಕೆಯನ್ನು ಹೊರತರುತ್ತಿರುವುದು ತುಂಬಾ ಸಂತೋಷಕರ. ತಮ್ಮ ಅಕಾಡೆಮಿಯಿಂದ ಹಮ್ಮಿಕೊಳ್ಳುವ ಕಾರ್ಯಕ್ರಮವು ಜನಪರ ಕಾರ್ಯಕ್ರಮದಿಂದ ಕೂಡಿದ್ದು, ಇದರಿಂದ ಭಾಷೆ, ಸಂಸ್ಕೃತಿ ಉಳಿಯುವಂತೆ ಮತ್ತು ಬೆಳೆಸುವಂತೆ ಆಗಲಿ ಎಂದು ಕೊಡಗಿನ ಕುಲ ದೇವತೆ ಶ್ರೀ ಕಾವೇರಿ ಮಾತೆ ಹಾಗೂ ಶ್ರೀ ಇಗ್ಗುತ್ತಪ್ಪನಲ್ಲಿ ಬೇಡಿಕೊಳ್ಳುತ್ತೇನೆ.

ತಾವು ಹೊರತ್ತರುವ ಪತ್ರಿಕೆಯಲ್ಲಿ ವಿಶೇಷ ಲೇಖನಗಳಿಂದ ಕೂಡಿ ಇದರಿಂದ ಸಜ್ಜನ ಸಾಮಾನ್ಯರಿಗೆ ಒಂದು ದಾರಿದೀಪವಾಗಿ ಹೊರಹೊಮ್ಮಲಿ ಹಾಗೂ ತಮ್ಮ ಪತ್ರಿಕೆಯು ಪ್ರಸಿದ್ಧಿ ಹೊಂದಲಿ ಎಂದು ಹಾರೈಸುತ್ತೇನೆ.

ಅಕಾಡೆಮಿಯ ಆಡಳಿತ ಮಂಡಳಿಯವರಿಗೆ ಸಂಪಾದಕರಿಗೆ ಹಾಗೂ ಸರ್ವರಿಗೂ ನನ್ನ ಶುಭಾಶಯಗಳು.

## ಅಧ್ಯಕ್ಷರ ನುಡಿ

ಸುಂದರ ಕೊಡಗ್‌ನ ಮಲೆನಾಡ್ ಮತ್ತೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ಭಾಗಲಿ ದೊಡ್ಡ ಸಂಖ್ಯೆಲಿ ಅರೆಭಾಷಿಕ ಜನಾಂಗದ ಮೂಲ ಸಂಸ್ಕೃತಿ ಸಾಹಿತ್ಯನ ದೊಡ್ಡ ಮಟ್ಟಲಿ ಗಟ್ಟಿಗೊಳ್ಳುವ ಉದ್ದೇಶಲಿ 29.05.2012ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಸ್ತಿತ್ವಕ್ಕೆ ಬಂದುಟ್ಟು ಅಂದ್‌ನ ಕರ್ನಾಟಕ ರಾಜ್ಯದ ಮುಖ್ಯಮಂತ್ರಿ ಆಗಿದ್ದ ಅರೆಭಾಷಿಕರಾದ ಸನ್ಮಾನ್ಯ ಶ್ರೀ ಡಿ.ವಿ.ಸದಾನಂದ ಗೌಡವು ಅಕಾಡೆಮಿಗೆ ಚಾಲನೆ ನೀಡಿ ಹಲವು ವರ್ಷಗಳ ಅರೆಭಾಷಿಕರ ಕನ್ಸ್‌ನ ನನ್ಸ್‌ಗೊಳ್ಸಿದೊ.

ಅಕಾಡೆಮಿ ಶುರುನ ಅಧ್ಯಕ್ಷರಾಗಿ ಶ್ರೀ ಎನ್.ಎಸ್.ದೇವಿಪ್ರಸಾದ್ ನವು ಅಧಿಕಾರ ವಹ್ಸಿಕಂಡ್ ತ್ರೈಮಾಸಿಕ ಪತ್ರಿಕೆಗೆ ಪ್ರಾಮಾಣಿಕವಾಗಿ ಚಾಲನೆ ಕೊಟ್ಟೊ ಕಾರಣಾಂತರಗಳ್‌ಂದ ಬಿಡ್‌ಗಡೆ ಮಾಡಿಕೆ ಆತ್ಲೆ.

2014ನೇ ಆಗಸ್ಟ್ 17ನೇ ತಾರೀಕ್ ನಾನ್ ಅಕಾಡೆಮಿ ಎರಡನೆ ಅಧ್ಯಕ್ಷನಾಗಿ ಅದಿಕಾರ ವಹಿಸಿಕಂಡೆ, ಮೊದಲಿಗೆ ವಿದ್ವಾಂಸರ ಅಭಿಪ್ರಾಯ ಪಡ್ಕಣಿಕೆ ವಿದ್ವಾಂಸರ ವಿಚಾರ ಸಂಕಿರಣ ಕಾರ್ಯಕ್ರಮನ ಕಚೇರಿಲಿ ಮಾಡ್ದೊ ಅಕಾಡೆಮಿನ ಕಾರ್ಯಚಟುವಟಿಕೆ ಪ್ರಚಾರ ಪಡ್ಸುವ ನಿಟ್ಟ್‌ಲಿ ಅಕಾಡೆಮಿ ವೆಬ್ ಸೈಟ್ ರಚನೆ ಮಾಡ್ಸಿ ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯನವು ಚಾಲನೆಕೊಟ್ಟೊ, ಅರೆಬಾಸೆ ಸಂಸ್ಕೃತಿನ ಬೆಳ್ಸುವ ನಿಟ್ಟ್‌ಲಿ ಕುಶಾಲನಗರ ಗೌಡ ಸಮಾಜಲಿ ಸಾಂಸ್ಕೃತಿಕ ಸಮ್ಮಿಲನ ಕಾರ್ಯಕ್ರಮ ಹಮ್ಮಿಕಂಡ್ ಈ ಕಾರ್ಯಕ್ರಮಕ್ಕೆ ಸನ್ಮಾನ್ಯ ಸಚಿವರ್ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಶ್ರೀಮತಿ ಉಮಾಶ್ರೀಯವು ಉದ್ಘಾಟನೆ ಮಾಡ್ದೊ, ಬೆಂಗಳೂರು ಕೊಡಗು ದಕ್ಷಿಣ ಕನ್ನಡ ಗೌಡ ಸಮಾಜಲಿ ಸಾಂಸ್ಕೃತಿಕ ಸಮಾವೇಶಂತೇಳ್ವ ಕಾರ್ಯಕ್ರಮ ಮಾಡ್ಯೋಳೊ, ಅರೆಭಾಷೆ ಜನಾಂಗದ ಪುರಾತನ ಕಾಲದ ಆಚಾರ ವಿಚಾರಗಳ ನಂಟ್ ಬೆಸೆದ್‌ಕೊಂಡಿರುವ ಐನ್‌ಮನೆ ಕುರ್ತ್ ಜನಾಂಗ ಬಾಂಧವ್ಯಕ್ಕೆ ತಿಳ್ಸುವ

ನಿಟ್ಟ್‌ಲ್ಲಿ "ಐನ್‌ಮನೆ ಸಂಸ್ಕೃತಿ ಜಂಬರ" ಎಂಬ ಕಾರ್ಯಕ್ರಮನ ಐಕೋಳ ಗ್ರಾಮದ ಕೊಂಪುಳೀರ ಐನ್‌ಮನೆಲಿ ಏರ್ಪಡಿಸಿದ್ದೊ, ಬೇರೆ ಬೇರೆ ಸಂಘಸಂಸ್ಥೆಗ ಅರೆಭಾಷೆ ಕಾರ್ಯಕ್ರಮಗಳ ಪ್ರಾಯೋಜಕತ್ವ ಪಡ್ಕಂಡೊಳೊ, ಸುಳ್ಯದ ಕನಕಮಜಲು ಯುವಕ ಮಂಡಲ ಸುಯೋಗಲಿ ಅರೆಭಾಷೆ ಸಂಸ್ಕೃತಿ ಕುರಿತಾಗಿ ಚಿತ್ರಕಲಾವಿದರ ಸಮಾವೇಶ ಮಾಡ್ದೊ, ಜನಾಂಗ ಭಾಂಧವ್ಯ ಆಟಿ ತಿಂಗಳ ಆಚಾರ-ವಿಚಾರ ಬಗ್ಗೆ ಮಾಹಿತಿ ಕೊಡಿಕೆ ಮರಗೋಡು, ಸುಳ್ಯ, ದುಗ್ಗಲಡ್ಕ, ಮಂಡೆಕೋಲು ಇಲ್ಲಿ ಆಟಿ ಉತ್ಸವಂತೇಳ್ವ ಕಾರ್ಯಕ್ರಮಗಳ್ನ ಅಕಾಡೆಮಿಂದ ಹಮ್ಮಿಕೊಂಡಿದ್ದೊ.

ಈಗಾಗಲೆ ಅಕಾಡೆಮಿಂದ 4 ಪುಸ್ತಕ ಮುದ್ರಣ ಆಗುಟ್ಟು ಇದರ ಬಿಡ್‌ಗಡೆನ ಶೀಘ್ರಲಿ ಮಾಡುವೆ, ದೊಡ್ಡಮಟ್ಟಲಿ ಕಾರ್ಯಕ್ರಮ ಮಾಡಿಕೆ ಕ್ರಿಯಾಯೋಜನೆ ಸಿದ್ದಪಡಿಸಿ ಚಾಲನೆ ಕೊಟ್ಟೊಳೊ. ಕೊಡಗ್ ಮತ್ತೆ ಸುಳ್ಯಲಿ ಅರೆಭಾಷಿಕರ್ ಹೆಚ್ಚಾಗಿದ್ದ್ ಮೂಲ ಸಂಸ್ಕೃತಿಗೆ ಧಕ್ಕೆ ಬರದಂಗೆ ಪ್ರಾದೇಶಿಕವಾಗಿ ಅಲ್ಲಿನ ಸಂಸ್ಕೃತಿನ ಪಾಲಿಸಿಕಂಡ್ ಹೋಗ್ತಾವೊಳೊ.

ಅರೆಬಾಸೆ ಸಂಸ್ಕೃತಿ ಸಾಹಿತ್ಯ ಜನಪದ ಆಚಾರ-ವಿಚಾರಗಳ್ನ ತ್ರೈಮಾಸಿಕ ಪತ್ರಿಕೆ ರೂಪಲಿ ನಿಮ್ಮ ಮುಂದೆ ಇಡ್ತಾ ಒಳೊ. ಈ ಸಂದರ್ಭಲಿ ನೀವ್‌ಗಳ ಸಂಪೂರ್ಣ ಸಹಕಾರ ಅಕಾಡೆಮಿನ ಕಟ್ಟಿ ಬೆಳ್ಸಿಕೆ ಬೇಕೂಂತ ಕೋರುವೆ..

5-10-2015 **ಕೊಲ್ಯದ ಗಿರೀಶ್**

## ಸಂಪಾದಕೀಯ

ಬಾಸೆಗೆ ಸಂಸ್ಕೃತಿಗೆ ಹಕ್ಕಲೆ ಸಂಮಂದ. ಸಮುದಾಯವೊಂದ್ ತನ್ನ ಮೂಲ ಸಂಸ್ಕತಿಲಿ ಬದ್ಕಿರೆ ಬಾಸೆನೂ ಉಳ್ದದೆ. ದಿನ ಬಳ್ಕೆಲಿ ಬಾಸೆನ ಬಳ್ಸಿ–ಗಳ್ಸಿರೆ ಅದ್ ಜೀವಂತ ಆಗಿ ಇದ್ದದೆ; ಇಲ್ಲರೆ ಸತ್ತೋದೆ.

ನಮ್ಮ ಅರೆಬಾಸೆಗೆ ಪಿರಾಕ್‌ನ ಇತಿಹಾಸ ಉಟ್ಟು. ಕಡ್ಮೆಂತೆಳ್ರೆ ಸುಮಾರ್ 500 ವರ್ಸಂದ ಜಾಸ್ತಿನ ಇತಿಹಾಸ ಉಟ್ಟು. ಇದ್ ದ್ರಾವಿಡ ಬಾಸೆಲಿ ಇರ್ರ್ವ ಬಡಗ್ ಬಾಸೆಗೆ ತೀರ ಹಕ್ಕಲೆ ಉಟ್ಟುಂತೇಳಿ ಬಾಸಾ ವಿಜ್ಞಾನಿಗ ಹೇಳ್ವೆ. ಒಂದ್ ಕಾಲಲಿ ಈ ಬಾಸೆನ ಹಾಸನದ ಐಗೂರು ಸೀಮೆಂದ ವಲ್ಸೆ ಬಂದ್ ದಕ್ಷಿಣ ಕನ್ನಡ ಹಾಂಗೆನೆ ಕೊಡಗ್‌ಲಿ ವಾಸ ಮಾಡ್ವ ಒಕ್ಕಲಿಗ ಗೌಡ್ರ್ ಮಾತಾಡ್ತಿದ್ದೊ. ಇಂದ್ ಅದ್ ಈ ಪ್ರದೇಸಲಿ ವಾಸ ಮಾಡ್ವ ಬೇರೆ ಸಮುದಾಯಗ ಸಹ ವ್ಯವಹಾರಿಕೆಲಿ ಮಾತಾಡ್ವ ಬಾಸೆಯಾಗಿ ಮಹತ್ವ ಪಡ್ಕಂಡುಟ್ಟು.

ಒಂದು ಬಾಸೆ ಬೆಳ್ದ್ ಆ ಬಾಸೆ ಮಾತಾಡ್ವ ಸಮುದಾಯಕ್ಕೆ ಸ್ಥಾನ–ಮಾನ ಸಿಕ್ಕೊಕಾದರೆ ಅದ್ ಇತರ ಬಾಸೆ ಮತ್ತು ಸಮುದಾಯಗಳೊಟ್ಟಿಗೆ ಗುರ್ತಿಸಿಕಂಕಾದೆ. ಇದ್ ಆಕುಂತಾದ್ರೆ ವರ್ತಮಾನದ ಪ್ರಭುತ್ವಂದ ಮಾನ್ಯತೆ ಪಡ್ಯೊದು ಅಗತ್ಯ ಸಂಗತಿ. ಈ ಸಂಗತಿನ ತಿಳ್ಕಂಡ್ ಅರೆಬಾಸಿಕ ಭೌಗೋಳಿಕತೆನ ಮುಖಂಡರ್, ಹಿರಿಯರ್ ಹಾಂಗೂ ರಾಜಕೀಯ ನಾಯಕರ ಸ್ರಮಂದಾಗಿ ಅರೆಬಾಸೆಗೊಂದ್ ಅಕಾಡೆಮಿ ಬಾಕೆ ಸಾದ್ಯ ಆತ್. ಹಲವರ ಪ್ರಯತ್ನಲಿ ಆದ ಈ ಅಕಾಡೆಮಿನ ಬೆಳ್ಸುದು ಅರೆಬಾಸಿಕ ರಾದ ನಮ್ಮ ಜವಾಬ್ದಾರಿ ಆಗುಟು. ಈ ಹಿನ್ನೆಲೆಲಿ ಅಕಾಡೆಮಿ ಈ ಹಿಂಗಾರ ಎನ್ನುವ ತ್ರೈಮಾಸಿಕ ಪತ್ರಿಕೆನ ತಾಕೆ ಉದ್ದೇಶಿಸಿಟು.

ಈ ಹಿಂಗಾರ ಪತ್ರಿಕೆ ಅರೆಬಾಸಿಕ ಹಿರಿಯ ಸಾಹಿತಿಗಳಿಗೆ, ಬರವಣಿಗೆಲಿ ತೊಡ್ಗುವ ಕಿರಿಯವ್ಕೆ ಒಂದು ಅರ್ಥಪೂರ್ಣ ವೇದಿಕೆನ ಕಲ್ಪಿಸಿದೆ ಎಂದು ನಾವು ಭಾವಿಸೋಳೊ ಹಾಂಗೆನೆ ಇಲ್ಲಿನ ಬರಹಗಳ ಓದುವ ಅರೆಬಾಸಿಕ ಅಬಿಮಾನಿಗಳಿಗೆ ಅರೆಬಾಸೆನ ಸವಿನ ಮೂರು ತಿಂಗಳಿಗೊಮ್ಮೆ ಕೊಡುವ ಪ್ರಯತ್ನ ಇದಾಗುಟು. ಅರೆಬಾಸಿಕರಾದ ನಾವೆಲ್ಲ ಕೈ ಸೇರ್ಸಿ ಇದರ

ಮುನ್ನಡ್ಸೊಕು. ಹೀಂಗೆ ನಾವು ಮಾಡ್ರೆ ಅರೆಬಾಸೆನ ಸಾಹಿತ್ಯ-ಸಂಸ್ಕೃತಿನ ಉಳ್ಸಿ ಬೆಳ್ಸುವ ಕಾರ್ಯನೂ ಆದೆ. ಈ ದೃಸ್ಟಿಂದ ನಮ್ಮ ಅರೆಬಾಸೆನ ಸಾಹಿತ್ಯ-ಸಂಸ್ಕೃತಿನ ಕಾಲದರ್ಮಕ್ಕೆ ಹೊಂದಿಕೆ ಆಗುವ ಹಾಂಗೆ ಬೆಳ್ಸಿಕೆ ಒಳನೋಟಗ ಅತಿ ಅಗತ್ಯ ಉಟ್ಟು. ಹಿಂಗಾಗಿ ನಾವೀಗ ಅರೆಬಾಸೆಲಿ ಹೊಸ ಹೊಸ ಆಲೋಚನೆಗ ಇರ್ವ ಬರವಣಿಗೆನತ್ತ ಹೊರಳೊಕ್ಕಾದೆ. ಹಾಂಗೆನೆ ಇರ್ವಂತದರ ದಾಕಲ್ಸಿಕಂಕಾದೆ. ಈ ದೃಸ್ಟಿಲಿ ಈಗಿನ ಅಕಾಡೆಮಿನ ಹೊಸ ಅಧ್ಯಕ್ಷ, ಸದಸ್ಯ ತಂಡಗ ಯೋಚನೆ-ಯೋಜನೆ ಹಾಕೊಂಡೊಳೊ.

ಈ ಸಂಚಿಕೆ ಅಕಾಡೆಮಿನ ಸುರುನ ಸಂಚಿಕೆ. ಅರೆಬಾಸೆಲಿ ಬರ್ದರೆ ಯಾರ್ ಓದುವೆ? ಯಾರ್ ಪ್ರಕಟಿಸುವೆಂತೇಳುವ ಅಳ್ಕ್ ಅರೆಬಾಸಿಕ ಬರಹಗಾರರಿಗುಟ್ಟು. ಈ ಸಂಚಿಕೆ ಈ ಅಳ್ಕ್‌ನ ತೆಗೆವ ಪ್ರಯತ್ನ ಮಾಡ್ದೆ. ಬರೆವ ನೀವು ಬರ್ದ್ ಕಳ್ಸಿರೆ ಸಂಚಿಕೆ ಅವಕಾಶ ಮಾಡಿಕೊಟ್ಟದೆ. ಅರೆಬಾಸೆಲಿ ಬರೆವ ಮತ್ತು ಓದುವವ್ಕೆ ಅವಕಾಶ ಮಾಡಿಕೊಡ್ದು ಈ ಸಂಚಿಕೆನ ಉದ್ದೇಶಗಳಲಿ ಒಂದ್. ಮರೆ ಆಗ್ತಾ ಇರ್ವ ಅರೆಬಾಸೆ ಸಂಸ್ಕೃತಿನ ಸಾಹಿತ್ಯ ರೂಪಲಿ ಹೊರತಂದ್ ಇಡೀ ದೇಶಲಿ ಪಸರ್ಸುವ ಕೆಲ್ಸನ ಇನ್ನ್ ಮುಂದೆ ಈ ತ್ರೈಮಾಸಿಕ ಸಂಚಿಕೆ ಮಾಡ್ದೆ. ಅಕಾಡೆಮಿನ ಮಾಡಿ ಸರ್ಕಾರ ಕೊಟ್ಟ ಅವಕಾಶಲಿ ನಾವೇನೇನು ಕಾರ್ಯಕ್ರಮಗಳ ಮಾಡ್ಯೊಳಂತೇಳಿ ಇಲ್ಲಿ ದಾಕಲ್ಸಿ ಇದರ ಬೇರೆವ್ಕೂ ತಿಳ್ಸುವ ಪ್ರಯತ್ನನೂ ಇಲ್ಲಿ ಮಾಡ್ಯೊಳೊ. ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಕುರಿತಾದ ಧನಾತ್ಮಕ ವಿಚಾರಗಳ ದಾಕಲ್ಸಿಕಂಬ ಪ್ರಯತ್ನ ಆಗಿರ್ವ ಈ ಸಂಚಿಕೆಲಿ ನೀವು ಪಾಲ್ದಾರರಾದು ಬಾಳ ಮುಕ್ಯಂತೇಳಿ ನಾವು ಬಾವಿಸ್ಯೊಳೊ; ನಂಬ್ಯೊಳೊ.

ಈ ಸಂಚಿಕೆ ಹೊರ ತರ್ವಲ್ಲಿ ಅಕಾಡೆಮಿನ ಅಧ್ಯಕ್ಷರ್, ರಿಜಿಸ್ಟ್ರಾರ್ ಹಾಂಗೆನೆ ಸರ್ವಸದಸ್ಯರ್ ಸ್ರಮ ಪಟ್ಟೊಳೊ. ಅರೆಬಾಸಿಕ ಹಿರಿಯ –ಕಿರಿಯ ಚಿಂತಕರ್, ಕವಿಗ, ಕತೆಗಾರರ್ ತಮ್ಮ ಬರಹಗಳ ಕೊಟ್ಟ್ ಈ ಸಂಚಿಕೆನ ಮಹತ್ವಪೂರ್ಣವಾಗಿಸುವಲ್ಲಿ ಸಹಕರಿಸ್ಯೊಳೊ. ಸಂಚಿಕೆನ ಮುಖಪುಟ ಮಾಡ್ದ ಮೋಹನ್ ಸೋನ ಹಾಂಗೆನೆ ಸಂಚಿಕೆನ ವಿನ್ಯಾಸ ಮಾಡ್ವಲ್ಲಿ ಸಾಕಾರ ಮಾಡ್ದ ಎಲ್ಲೊವ್ಕೆ ತುಂಬು ಕೃತಜ್ಞತೆಗ.

ಸಂಪಾದಕ ಮಂಡಳಿ ಪರವಾಗಿ

5–10–2015 **ಡಾ. ಪೂವಪ್ಪ ಕಣಿಯೂರು**



# ಹಿಂಗಾರ ಒಡ್ಸ್‌ಕನ

ಅಕಾಡೆಮಿ ಪ್ರಕಟಣೆಗ

## ಪರಿಚಯ



# ಪ್ರೊ. ಕೋಡಿ ಕುಶಾಲಪ್ಪ ಗೌಡರ್

**ಸಂಜೀವ ಕುದ್ಪಾಜೆ**

ಪ್ರೊ. ಕೋಡಿ ಕುಶಾಲಪ್ಪ ಗೌಡರ್ ಮಡಿಕೇರಿ ತಾಲೂಕಿನ ಪೆರಾಜೆ ಗ್ರಾಮಲಿ ಇದ್ದ ಕೋಡಿ ಕೃಷ್ಣಪ್ಪ ಗೌಡ– ಗೌರಮ್ಮ ಅಂತ ಹೇಳುವ ದಂಪತಿಗಳ ಮೂರನೇ ಮಂಙ ಆಗಿ 1931ನೇ ಇಸ್ವಿ ಮೇ ತಿಂಗಳ 30ನೇ ತಾರೀಕಿಗೆ ಹುಟ್ಟಿದೋ. ಇವು ಹುಟ್ಟಿ ಕೆಲವೇ ವರುಷಲಿ ಇವರ ಅಪ್ಪ ತೀರಿ ಹೋದೊ. ಕುಟುಂಬ ಶ್ರೀಮಂತ ಏನೂ ಅಲ್ಲ. ತೀರ ಬಡತನಂಥ ಹೇಳುವಂಥದ್ದೂ ಅಲ್ಲ. ಹಿಂಗೆ ಅವರ ಬಾಲ್ಯ ಅಷ್ಟೇನೂ ಸುಖ ಸಂತೋಷಂದ ಕೂಡಿತ್ತ್‌ಲೆ.

ಪ್ರಾಥಮಿಕ ವಿದ್ಯಾಭ್ಯಾಸ ಪೆರಾಜೆಲಿ ದೇವಸ್ಥಾನದ ಅಂಗಳಲಿ ಇದ್ದ ಒಂದು ಜೋಪುಡಿ ಕಟ್ಟಡಲಿ ನಾಲ್ಕನೇ ತರಗತಿವರೆಗೆ ನಡ್ತ್. ಅವರ ಏಳನೇ ವರ್ಷಲಿ ಈ ಶಾಲೆಗೆ ಸೇರ್‍ದೊ. ಮನೇಲಿ ಅಣ್ಣಂದರ್ ಪಾಠ ಹೇಳಿ ಕೊಡುತ್ತಿದ್ದೊ. ಆದ್ದರಂದ್ ಸಾಲೆಲಿ ಓದು ಬರಲಿ ಹುಸಾರಾಗಿದ್ದೊ. ಇದರಿಂದಾಗಿ ಇವರ ಜೊತೆಗಿದ್ದ ಮಕ್ಕಳಿಗೆ ಕೇಡ್. ಹಾಂಗೆ ಏನಾರ್ ಕಾರಣ ತೆಗ್ದ್ ಇವರೊಟ್ಟಿಗೆ ಜಗಳಕ್ಕೆ ಬಾತಿದ್ದೊ. ಉರುಡುದು, ದಂಡೆ ಕುಟ್ಟುದು ಇದ್ ಎಲ್ಲ ನಡೆಯತ್ತಿತ್ತ್. ಅವು ತಕ್ಕ ಮಟ್ಟಿಗೆ ಗಟ್ಟಿ ಮುಟ್ಟಾಗಿದ್ದೊ.

ಬೇರೆ ಮಕ್ಕಳೊಟ್ಟಿಗೆ ಸೋಲ್ತ್‌ತ್ತಿಲೆ. ನಾಲ್ಕನೇ ತರಗತಿ ಮುಗ್ದ್ ಮತ್ತೆ ಸುಳ್ಯ ಬೋರ್ಡ್ ಹೈಯರ್ ಎಲಿಮೆಂಟರಿ ಶಾಲೆಲಿ ಐದನೇ ಕ್ಲಾಸಿಗೆ ಸೇರ್‍ದೊ. ಈ ಶಾಲೆಲಿ ಶಂಕರನಾರಾಯಣಪ್ಪಯ್ಯ ಅಂತ ಹೇಳುವ ಮಾಸ್ಟರ್ ಇದ್ದೊ. ಅವುಕೆ ಕನ್ನಡಲಿ ತುಂಬಾ ಪ್ರೀತಿ. ಹಾಂಗೆ ಇದರಲಿ ಮಕ್ಕಳ ತುಂಬಾ ಪ್ರೋತ್ಸಾಹಿಸುತಿದ್ದೊ. ಕತೆ, ಕವನ ಮುಂತಾಗಿ ಬರಿಯಕೆ ಪ್ರೋತ್ಸಾಹ ಕೊಡುತಿದ್ದೊ. ಹಾಂಗೆ ಇವುಕೆ ಈ ವಿಷಯಲಿ ತುಂಬಾ ಆಸಕ್ತಿ ಹುಟ್ಟಿತ್ತ್. ಬರಹಗಳ ಆಗಲೇ ಬರಿಯಕೆ ಸುರು ಮಾಡ್ದೊ. ಆ ಮಾಸ್ಟ್ರಿಗೆ ಇವರ ಮೇಲೆ ತುಂಬಾ ಪ್ರೀತಿ. 'ಮಕ್ಕಳ ಜೋಳಿಗೆ' ಅಂತ ಹೇಳುವ ಕೈ ಬರಹದ ಪತ್ರಿಕೆನ ಹೊರಡಿಸುತಿದ್ದೊ. ಇವರ ಅಕ್ಷರನೊ ಪೋಲ್ರ್ ಇತ್ತ್. ಹಾಂಗಾಗಿ ಇವರನೇ ಅದಕ್ಕೆ ಸಂಪಾದಕಂತ ಮಾಡ್ದೊ.

ಎಂಟನೇ ತರಗತಿ ಮುಗ್ದ್‌ದ್ ಮುಂದೆ ಪುತ್ತೂರ್‌ನ ಬೋರ್ಡ್ ಹೈಸ್ಕೂಲಿಗೆ ಸೇರ್‍ದೊ. ಎಸ್.ಎಸ್.ಎಲ್.ಸಿ. ಮುಟ್ಟ ಓದಿ ಕಡೆ ಪರೀಕ್ಷೆಲಿ ಒಳ್ಳೆ ಮಾರ್ಕ್ ತೆಗ್ದ್ ಪಾಸಾದೊ. ಆ ಮೇಲೆ ಆಗ ತಾನೆ ಮಡಿಕೇರಿಲಿ ಸುರು ಆದ ಗವರ್ನ್‌ಮೆಂಟ್ ಕಾಲೇಜಿಗೆ ಇಂಟರ್ ಮೀಡಿಯಟ್ ಕ್ಲಾಸಿಗೆ ಸೇರ್‍ದೊ. ವಿಜ್ಞಾನ ವಿಷಯಗಳ ಆಯ್ಕೆ ಮಾಡಿಕಂಡೊ. ಇಷ್ಟರವರೆಗೆ ಇವು ಓದಿದ್ ಕನ್ನಡ ಮಾಧ್ಯಮಂದ ಈಗ ಒಂದೊಂಮ್ಮೆಗೆ ಇಂಗ್ಲೀಷ್ ಮಾಧ್ಯಮ. ಆದ್ದರ್‌ಂದ ತುಂಬಾ ಕಷ್ಟ ಆತ್. ಅಂತಿಂತು ಹೆಂಗೊ ಇಂಟರ್ ಮೀಡಿಯಟ್ ಪರೀಕ್ಷೆಲಿ ಪಾಸ್ ಆಗಿಬುಟ್ಟೊ.

ಮುಂದೆ ಏನ್ ಮಾಡ್ದು ಅಂತ ಯೋಚನೆ ಮಾಡಿ ಯಾರ್‍ದೊ ಸಲಹೆ ಪ್ರಕಾರ ಧಾರವಾಡದ ಅಗ್ರಿಕಲ್ಚ್‌ರಲ್ ಕಾಲೇಜಿಗೆ ಸೆರ್‍ದೊ. ಆಗ ಧಾರವಾಡ ಮುಂತಾದ ಪ್ರದೇಶಗ ಮುಂಬಯಿ ಸರಕಾರದ ಅಧೀನಲಿತ್ತ್ ಇವು ಕೊಡಗಿನ 'C' ಸ್ಟೇಟ್‌ಗೆ ಸೇರ್‍ದುವೊ. ಹಾಂಗೆ ಹೊರನಾಡ್‌ಂದ ಬಂದ ವಿದ್ಯಾರ್ಥಿಗಳಿಗೆ ಸ್ಥಳೀಯರಿಗಿಂತ ಮೂರು ಪಾಲ್ ಫೀಸು ಕಟ್ಟುಕೊಂತ ಕಾನೂನು ಇತ್ತ್. ಇವುಕೆ ಇದ್ ಸರಿ ಕಾಣದೆ ಅದರ ಬುಟ್ಟ್ ಮನೆಗೆ ಬಂದೊ. ಮರು ವರುಷ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿಗೆ ಕನ್ನಡ ಬಿ.ಎ. ಆನರ್ಸ್ ಮಾಡಿಕೆ ಸೇರ್‍ದೊ. ಇದ್ ಮೂರು ವರುಷದ ಕೋರ್ಸ್. ಇದರಲಿ ಪಾಸಾದ ಮೇಲೆ ಒಂದು ವರುಷ ಕಳ್ದ್ ಇದೇ ಡಿಗ್ರಿ ಎಂ.ಎ. ಆಗಿ ಪರಿವರ್ತನೆ ಆದೆ. ಇಷ್ಟರಲಿ ಇವುಕೆ ಮದುವೆನೂ ಆಗಿತ್ತ್. ಮತ್ತೆ ಉದ್ಯೋಗದ ಬೇಟೆ ಸುರ್ ಆತ್. ಒಂದು ವರುಷ ಪ್ರೆಸಿಡೆನ್ಸಿ ಕಾಲೇಜಿಲಿ ಇನ್ನೊಂದ್ ವರುಷ ಮದನಪಳ್ಳಿನ ಬೆಸೆಂಟ್ ಥಿಯೋಸೋಫಿಕಲ್ ಕಾಲೇಜಿಲಿ ಲೆಕ್ಚರರ್ ಆಗಿ ಸೇರ್‍ದೊ. ಇದೆಲ್ಲ ತಾತ್ಕಾಲಿಕ ಕೆಲ್ಸಗ. ಆ ಮೇಲೆ ಅಣ್ಣಾಮಲೈ ಯೂನಿವರ್ಸಿಟಿನ ದ್ರಾವಿಡ ಭಾಷಾ ವಿಭಾಗಕ್ಕೆ ಲೆಕ್ಚರರ್ ಆಗಿ ಪ್ರೊಫೆಸರ್ ಮರಿಯಪ್ಪ ಭಟ್ಟರ ದಯೆಂದ ಹೆಂಗೂ ಸೇರ್‍ಕಂಡೊ. ಅಲ್ಲಿ ಹದಿನೆಂಟ್ ವರ್ಸ ಕೆಲ್ಸ ಮಾಡ್ದೊ. ಆ ಮೇಲೆ ಮದರಾಸು ಯೂನಿವರ್ಸಿಟಿನ ಕನ್ನಡ ವಿಭಾಗದ ಪ್ರೊಫೆಸರ್ ಆಗಿ, ಮುಖ್ಯಸ್ಥರಾಗಿ 1991ರವರೆಗೆ ಕೆಲ್ಸ ಮಾಡಿ ನಿವೃತ್ತಿ ಹೊಂದಿದೊ. ಈಗಾಗಲೇ ಕೆಲವು ಸಂಶೋಧನ ಪುಸ್ತಕಗಳ ಹಲವು ಸಂಶೋಧನ ಲೇಖನಗಳ ಪ್ರಕಟ ಮಾಡ್ದೊ. ಒಳ್ಳೆ ಹೆಸರ್ ಪಡ್ದೊ. ಅಮೇರಿಕದ ಒಬ್ಬ ಪ್ರಸಿದ್ಧ ಪ್ರೊಫೆಸರ್ (ಪ್ರೊ ಎಂ.ಬಿ.ಎಮಿನೊ) ಇವು ಕೊಟ್ಟ 'ಸಾಯಣ' ಎಂಬ ಪದದ

ನಿಷ್ಪತ್ತಿನ ಕೇಳಿ ಇವರ ಒಬ್ಬ ಸಹ ಲೇಖಕನ್ನಾಗಿ ಮಾಡಿಕಂಡ್ ಸಂಶೋಧನ ಲೇಖನ ಬರ್ದ್ ಅಮೇರಿಕದ ಒಂದ್ ಪ್ರಸಿದ್ಧ ಲಿಂಗ್ವಿಸ್ಟಿಕ್ಸ್ ಜನರ್‌ಲ್‌ಲಿ ಪ್ರಕಟ ಮಾಡ್ದೊ. ಇದ್ ಇವುಕೆ ತುಂಬಾ ಪ್ರಸಿದ್ಧಿ ತಂದ ವಿಷಯ.

ಇಂಗ್ಲೀಷಿಲಿ ಇವರ ನಾಲ್ಕ್ ಗ್ರಂಥ ಪ್ರಕಟ ಆಗುಟು. ಇವು ಸೇರಿ ಮತ್ತೆ ಕನ್ನಡಲಿ ಸಂಶೋಧನ ಮತ್ತು ಸೃಜನಾತ್ಮಕ ಅಂತ ಹೇಳಿ ಸುಮಾರು ಇಪ್ಪತ್ತೊಂದು ಗ್ರಂಥಗ ಪ್ರಕಟ ಆಗೊಳೊ. ಎತ್ತಿ ಹೇಳಕಾದ್ ಸಂಸ್ಕೃತಲಿ ವಿಜಯನಗರದ ರಾಣಿ ಗಂಗಾದೇವಿ ಬರ್ದ 'ಮದುರಾ ವಿಜಯಂ' ಕಾವ್ಯನ ಕನ್ನಡಲಿ ಪದ್ಯರೂಪಲಿ ಅನುವಾದ ಮಾಡಿ ಪ್ರಕಟ ಮಾಡ್ದೊ. ಇದೊಂದು ಜನ ಮೆಚ್ಚಿಗೆ ಪಡ್ದ ಗ್ರಂಥ. ಲಘು ಹಾಸ್ಯದ ಕೃತಿಗಾಗಿ 'ಊರೊಸಗೆ; ಕಡಲತಡಿಯ ಕನವರಿಕೆ, ಬೆಟ್ಟದ ಮೇಲೊಂದು ಮನೆಯ ಮಾಡಿ' ಹೀಂಗೆ ಮೂರು ಪುಸ್ತಗ ಪ್ರಕಟ ಆಗೊಳೊ. ಇತ್ತೀಚೆಗೆ ಇದರ ಒಟ್ಟು ಸೇರ್ಸಿ 'ಪಯಸ್ವಿನಿಯ ಕಲರವ' ಅಂತ ಹೇಳುವ ಪುಸ್ತಕನ ಮರು ಮುದ್ರಣ ಮಾಡ್ದೊಳೊ. ಇನ್ನೊಂದು ಅವರ ಮನಕರಗಿಸುವ ಪುಸ್ತಕ ಅಂದರೆ 'ಕಮಲನಿಮಿಲನ' ಅಕಾಲವಾಗಿ ತೀರಿಹೋದ ತನ್ನ ಹೆಣ್ಣಿನ ಸ್ಮಾರಕವಾಗಿ ಬರ್ದ್ ಪುಸ್ತಕ. ಇದ್ ಮರು ಮುದ್ರಣ ಆಗಿ ಬಂದುಟು. ಇವರ 83, 84ನೇ ವಯಸ್ಸ್‌ಲಿ 'ಮಾನಸ ಮಹಾಭಾರತ'ನ ನಮ್ಮ ಅರೆಬಾಸೆಲಿ ಬರ್ದ್ ಪ್ರಕಟ ಮಾಡ್ದೊಳೊ. ಇದ್ ಅರೆಬಾಸೆಗೆ ಸಂದ ಕೊಡುಗೆ. ಕತೆ ಹೇಳುವ ರೀತಿ ಬಾರಿ ಪೊರ್ಲಾಗುಟ್ಟು, ಓದಿದವೊ ಕಂಡಿತ ಮೆಚ್ಚೊಕು. ಕುಶಾಲಪ್ಪ ಗೌಡರ್ ಸರಳ ನಿರಾಡಾಂಬರ ವ್ಯಕ್ತಿ. ಅವರೊಟ್ಟಿಗೆ ಮಾತಾಡ್ದು ಅಂದರೆ ಯಾಗೊಳೊ ನಗೆ ಉಕ್ಕುಸುವಂಥ ಪ್ರಸಂಗಳ ಕಾಣಕ್. ವಿದ್ಯಾರ್ಥಿಗಳ ಮೆಚ್ಚಿನ ಗುರು ಆಗಿದ್ದೊ.

ಇವುಕೆ ಕರ್ನಾಟಕ ಸರಕಾರ ರಾಜ್ಯ ಪ್ರಶಸ್ತಿ ಕೊಟ್ಟೊ. ಕನ್ನಡ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಕೊಟ್ಟೊಳೊ. ಅಲ್ಲದೆ ಹಲವು ಸಂಸ್ಥೆಗ ಪ್ರಶಸ್ತಿಗಳ ಕೊಟ್ಟು ಗೌರವಿಸಿಯೊಳೊ. 2005ರಲಿ ಇವರ ಮಿತ್ರವೃಂದ ಮತ್ತು ವಿದ್ಯಾರ್ಥಿವೃಂದ ಸೇರಿ 'ನುಡಿಒಸಗೆ' ಅಂತ ಹೇಳುವ ಅಭಿನಂದನ ಗ್ರಂಥ ಇವುಕೆ ಸಮರ್ಪಣೆ ಮಾಡ್ದೊಳೊ. ಇವು ನಮ್ಮ ಅರೆಭಾಷಿಕ ಸಮುದಾಯಲಿ ಒಳ್ಳೆ ಹೆಸರ್ ಪಡ್ದ ವ್ಯಕ್ತಿಗಳ್‌ಲಿ ಒಬ್ಬ ಪ್ರಧಾನ ವ್ಯಕ್ತಿಂತ ಹೇಳುದರ್ಲಿ ಸಂಶಯವೇ ಇಲ್ಲೆ.



# 'ಸಂಸ್ಕೃತಿ' ನಿಂತ ನೀರ್ ಅಲ್ಲ

ಗೋಪಾಲ್ ಪೆರಾಜೆ

ನೀವು ಎಲ್ಲ್ಯಾರು ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ತೇಳ್ರೆ ಮೊದುವೆ, ಬೊಜ್ಜ, ಭೂತಕೋಲ, ಕೊಲೆಗಿಸುದು, ಹದ್ನಾರಕ್ಕಿಡುದು, ಜಾತ್ರೆ ಮುಂತಾದೊವು ನಡ್ಕಂಡು ಇರ್ವಲ್ಲಿಗೆ ಹೋದರೆ ಏನಾರು ವಿಷಯಂಗ ಬಾಕಾಕನ ಕೆಲವು ಜನಂಗ "ಅಣ್ಣ ಅದು ಹಳೇ ಕಾಲಂದಲೇ ಬಂದುಟು, ಪೂರ್ವಕಾಲದ ಕಟ್ಟುಕಟ್ಟಳೆ, ನಮ್ಮ ಜಾತಿ ಸಂತತಿ ಅಂತೆಲ್ಲ ಮಾತಾಡ್ದು ಕೇಳಿದೆ. ಇಂತವರ ತಲೆಲಿ ಸಂಸ್ಕೃತಿ, ಸಂಪ್ರದಾಯ ಎಲ್ಲ ಹಿಂದಿನ ಕಾಲಲಿ ಇದ್ದಾಂಗೆ ನಡ್ಕಂಡೇ ಬಂದುಟು, ಮುಂದೆನೂ ಶಾಶ್ವತ ಉಳ್ಕಂಡದೆ ಎಂಬುದುಟ್ಟು. ಈ ಮನ್ಸರ ನಂಬಿಕೆಗಳೇ ಎಷ್ಟೋ ಸರ್ತಿ ಅವರ ಅಂಧತೆ ಮೂಢತೆಗಳಿಗೆ ಕೂಡ ನೂಕಿದೆಂತ ಗೊತ್ತೇ ಆದ್ಲೆ. ಹೀಂಗೆ ಮಾತಾಡೊವು ಅವು ಮಾತ್ರ ಅಲ್ಲ ಒಟ್ಟಿಗೆ ಇದ್ದವೂ ಕೂಡ ತಲೆ ಕೆಡ್ಸಿ ಹಾಕುವೆ. ಈ ಬಳಗಲಿ ನಮ್ಮ ಪುರೋಹಿತ, ಪೂಜಾರಿ, ಊರುಗೌಡ, ತಂತ್ರಿ, ಕಣಿಯ, ವಿದ್ಯೆ ಇದ್ದವ ಇಲ್ಲದಂವ, ದೈವ ಕೊಟ್ಟಂವ, ದೈವ ಕಟ್ಟಿದಂವ ಎಲ್ಲ ಸೇರಿಕಂಡಿರ್ದು ಬೇಜಾರದ ಸಂಗತಿ. ಇವೆಲ್ಲ ಸೇರಿಕಂಡು ಒಂದು ರೀತಿಲಿ ಸಮಾಜದ ಹಿಂದಕೆ ಎಳ್ದವೆ. ಇದರ ಹಿಂದೆಲ್ಲ ಬಾಳಾ ಸ್ವಾರ್ಥ, ಮೋಸ, ಲಾಭದ ಮಾತುಗ, ದುಡ್ಡು ಹೊಡಿವ

ತಂತ್ರ ಕೂಡ ಇದ್ದದೆ. ಹಂಗಾಗಿ ಸಂಸ್ಕೃತಿ ಆಚರಣೆ ಎಲ್ಲ ದುಡ್ಡು ಮಾಡುವ ದಂಧೆ ಆಗುಟು. ಇಂದು ನಮ್ಮ ಜನಂಗ ಸಂಸ್ಕೃತಿ ಕಟ್ಟ್‌ಕಟ್ಲೆ ಹೇಳಿಕಂಡು ಕಷ್ಟಂಗಳ ಮೈಮೇಲೆ ಎಳ್ಕಂಡೊಳೊ. ಹಾಂಗೆಂತೇಳಿ ಎಲ್ಲಾ ಬುಡೊಕುಂತ ಇದರ ಅರ್ಥ ಅಲ್ಲ. ನಂಬಿಕೆಗೆಲ್ಲ ನಮ್ಮ ಬದ್ಕುಗೆ ಉರ್‍ಗೋಲು ಮಾತ್ರ. ಅವೇ ಸರ್ವಸ್ವ ಅಲ್ಲ. ಇದೆಲ್ಲದರಿಂದಾಗಿ ನಮ್ಮ ಮನ್ಸು ಕೆಡ್ದು ಸೋಲ್ದು ಆಕೆ ಆಗದು. ಹಂಗೇನೆ ಇದರೆಲ್ಲದರ ಹೆಸ್ರುಲಿ ನಮ್ಮ ಬೇರೆವು ಸುಲೆಕೆ ಕೂಡ ಆಗದು. ಸಮಾಜ ಬೆಳ್ದಾಂಗೆ, ವಿಜ್ಞಾನ ಬೆಳ್ದಾಂಗೆ ನಾವು ಹಳ್ತ್‌ನ ಕೆಲವು ಸಂಗತಿಗಳ ಬುಟ್ಟು ಬುಡಕಾದೆ. ಅಲ್ಲ ಗಂಡ ಸತ್ತಾಂಗೆ ಹಣೆ ಬೊಟ್ಟು ಒರ್ಸುದು, ಬಳೆ ಒಡಿದು ಹಾಕುದು, ತಾಳಿ ತೆಗ್ತಾಕುದು ಯಾವ ಸಂಸ್ಕೃತಿನೋ ದೇವ್ರುಗೆ ಗೊತ್ತು.

**ಸಂಸ್ಕೃತಿ ಹಾಂಗೆ ಹೇಳ್ರೆ ಎಂತದು:**

'ಸಂಸ್ಕೃತಿ' ಪದದ ಅರ್ಥ ವ್ಯಾಪ್ತಿ ಬಹಳ ದೊಡ್ಡದು. ಅದು ವ್ಯಕ್ತಿ ಸಮುಷ್ಠಿ ಎರಡರ ಒಳಗೂ ಸೇರಿಕೊಂಡುಟ್ಟು. ಅದರ ಸಣ್ಣ ಸಣ್ಣ ಶಬ್ದ ಅರ್ಥಗಳಲಿ ಕಾಂಬುದು ಕಷ್ಟ. ವ್ಯಕ್ತಿಯ ಅವನ/ಳ ನಡೆ, ನುಡಿ, ನಂಬುಗೆ, ಶಿಷ್ಟಾಚಾರ, ಮನೋಭಾವ, ಕೌಟುಂಬಿಕ ಮೌಲ್ಯಗಳೂ ಹೌದು. ಹಾಂಗೆ ತಾನು ಬದುಕುವ ಸಮಾಜದ ಕಟ್ಟುಕಟ್ಟಲೆ, ಆಚರಣೆಗ, ಕಲೆ, ಕೌಶಲ, ಆಹಾರ ಪದ್ಧತಿ, ಭಾಷೆ, ಸಂಗೀತ, ಬಟ್ಟೆಬರೆ, ಕೃಷಿ, ಎಲ್ಲವೂ ಹೌದು. ನಾನದರ ಅರ್ಥ ವಿವರಣೆ ವ್ಯಾಖ್ಯಾನಕ್ಕೇನು ಹೋದುಲೆ. ಆದರೆ ನನ್ನ ಪ್ರಶ್ನೆ ಇಷ್ಟೆ ನಿಜಕ್ಕೂ ಅದು ಬದುಲೇ ಆದುಲೆನಾ?

ಸುಮಾರು ಇನ್ನೂರು ವರ್ಷದಿಂದೀಚೆ ಈ ಪದ ಜಗತ್ತ್‌ನ ಸಂಶೋಧನ ವಲಯಲಿ ದೊಡ್ಡ ಗದ್ದಲ ಎಬ್ಬಿಸಿತು. ಈ ಪದವೋ ಅದು ಹೊರ್ಡುಸುವ ವಿಶಾಲ ವಿಚಾರಂಗ ಹೇಂಗೆಲ್ಲ ಹುಟ್ಟಿಕಂಡತು ಎಂಬುದರ ತಿಳ್ಕಂಬೊದು ಮುಖ್ಯ. ನೋಡಿ ಎಲ್ಲದಕ್ಕೂ ಮೂಲ "ಪ್ರಕೃತಿ". ಮೊಣ್ಣು, ನೀರು, ಗಾಳಿ, ಬಾನ, ಬೆಳ್ಕ್ ಅದರ ಹೊಂದಿಕಂಡು ಇರುವ ಮುಂಣ್ಜಿ, ಹಕ್ಕಿ, ಕ್ರಿಮಿ ಕೀಟಂಗಳ ಲೋಕ. ಅಂದರೆ ತನ್ನಷ್ಟಕೆ ತಾನೇ ಸೃಷ್ಠಿ ಆಗುವಂತದು. ಲೋಕಾಯತದ ಒಂದು ಸೂತ್ರಲಿ "ಸ್ವಭಾವಂ ಜಗತಃ ಕಾರಣಂ ಆಹುಃ:. ಇದರರ್ಥ ಸ್ವಭಾವವೇ ಜಗತ್ತುನ ಕಾರಣ. ಮಾತ್ರ ಅಲ್ಲ ಮಹಾನ್ ತತ್ವಜ್ಞಾನಿ ಜಗತ್ತುನ ಬೆಳ್ಕ್ ಆಗಿರುವ ಬುದ್ಧ ಒಂದು ಕಡೆ ಹೇಳ್ದ "ಪರಿವರ್ತನೆ ಜಗದ ನಿಯಮ" ಈ ಮಾತು ನಾವು ಹೇಳ್ವ ಸಂಸ್ಕೃತಿಗೂ ಅನ್ವಯಿಸಿದೆ.

ನಾವು ಹೇಳ್ದ ಸಂಸ್ಕೃತಿಗೂ ತನ್ನಷ್ಟಕ್ಕೆ ತಾನೇ ಹುಟ್ಟಿದ ಪ್ರಕೃತಿಗೂ ಹತ್ತಿರದ ನಂಟು. ಬಾವ ನಂಟ ಸಂಬಂಧದ ಹಾಂಗೆ. ಮನ್ಸರು ಕೂಡಾ ಪ್ರಕೃತಿನ ಒಂದು ಭಾಗ. ಆದರೆ ಅಂವನಲ್ಲಿ ಸೊಲ್ಪ ವಿಶೇಷ ಉಟ್ಟು. ಬುದ್ಧಿ ಶಕ್ತಿ ಜಾಸ್ತಿ. ಉಳ್ದ ಪ್ರಾಣಿಗೆ ಪ್ರಕೃತಿಗೆ ಹಕ್ಕಲೆನ ಜೀವನ ನಡ್ಸುವೆ. ಆದ್ರೆ ಮೊನ್ಸ ಹೊಸ್ತುನ ಹುಟ್ಟಿಸಿ ಹಾಕಿದೆ. ಅಂವ ಪ್ರಕೃತಿ ಮೇಲೆ ತನ್ನ ಬುದ್ಧಿನ ಚಲಾಯಿಸಿ ಹೊಸ್ತಿನ ಕಂಡುಕೊಂಡದೆ. ಅದುವೇ ಸಂಸ್ಕೃತಿನ ಮೂಲ. ಡಿ.ವಿ.ಜಿಯವರ್ದು ಕನ್ನಡ ಸಾಹಿತ್ಯ ಲೋಕಲಿ ದೊಡ್ಡ ಹೆಸರು. ಅವೇ ಕೊಡುವ ಕೆಲವು

ಉದಾಹರಣೆಗಳ ನೋಡೋಕು.

ಭತ್ತದ ಕಾಳು ಪ್ರಕೃತಿ; ಅನ್ನ ಪರಮಾನ್ನ ಸಂಸ್ಕೃತಿ. ಕೂದಲು ಪ್ರಕೃತಿ; ಹೇರಳು ತುರುಬು ಸಂಸ್ಕೃತಿ. ಹತ್ತಿ ಪ್ರಕೃತಿ; ಸೀರೆ, ಧೋತ್ರ ಸಂಸ್ಕೃತಿ. ಗಂಟಲು ಕಿರಿಚು ಪ್ರಕೃತಿ; ಸಂಗೀತ ಸಂಸ್ಕೃತಿ. ಹರಟೆ ಕೂಗಾಟ ಪ್ರಕೃತಿ; ಕಾವ್ಯ ನಾಟಕ ಸಂಸ್ಕೃತಿ. ಹುಟ್ಟಿದವನು ಹುಟ್ಟಿದಂತೆಯೇ ಇದ್ದರೆ ಪ್ರಕೃತಿ; ವಿದ್ಯೆ ನಾಗರೀಕತೆ ಸಂಸ್ಕೃತಿ, ಹೀಗೆ ಪ್ರಕೃತಿಯೊಡನೆ ಪೌರುಷ ವಿವೇಕ ಬೆರೆತಾಗ ಸಂಸ್ಕೃತಿ.

**'ಸಂಸ್ಕೃತಿ' ಹರಿವ ನೀರು:**

ಸಂಸ್ಕೃತಿ, ನಂಬಿಕೆ, ಜೀವನ ಮೌಲ್ಯಗಳು, ಹರಿವ ನೀರಿನಾಂಗೆ ಇವೆಲ್ಲ ಸಮಾಜ ಬೆಳ್ದಾಂಗೆ ಬದಲಾಕಂಡೆ ಹೋದವೆ. ನಿಸರ್ಗದ ನಿಯಮನೇ ಹಾಂಗೆ. ಜನ ತಿಳ್ಕಂಡವೆ ಇದೆಲ್ಲ ಮನ್ಸರು ಹುಟ್ಟಿದಾಂಗೆ ಬಂದುಟುಂತ. ಮನ್ಸ ಗುಹೆಯೊಳಗೆ ಇರುಕಾಕನ ಉರ್‍ಬುಳಿ ಇದ್ದಿರಕು. ಕಾಲಾಂತರಲಿ ಮೈಗೆ ಮರದ ತೊಪ್ಪೆ, ಸೊಪ್ಪು, ಪ್ರಾಣಿಗಳ ಚೋಲಿನ ಸುತ್ತಿಕಂಡತು. ಎಷ್ಟೋ ವರ್ಷಗಳ ನಂತರ ಹತ್ತಿ ಬಟ್ಟೆ ಕಂಡು ಕಂಡತು. ಕೋಮಣಲಿ ಇದ್ದವು ಪ್ಯಾಂಟು ಶರ್ಟುಗೆ ಬಂದಳೊ. ಕಾಡುಕಲ್ಲು, ಗುಡ್ಡೆ ಹೊಳೆಗೆ ಕೈ ಮುಕ್ಕಂಡು ಇದ್ದವು ಕಟ್ಟೆನೋ ಹುಲ್ಲುನ ಗುಡಿನೋ ಕಟ್ಟಿದೊ. ಅಲ್ಲೊಬ್ಬ ಪೂಜಾರಿ, ಪುರೋಹಿತ, ಮಂತ್ರವಾದಿ ಮಧ್ಯವರ್ತಿ ಯಾರು ಇತ್ತುಲೆ. ಇಂದು ದೇವ್ರುಗಳಿಗೆ ದೈವಗಳಿಗೆ ದೊಡ್ಡ ದೊಡ್ಡ ಕಟ್ಟಡಗ ದೇವಸ್ಥಾನ, ಕಾಂಪ್ಲೆಕ್ಸ್‌ಗ ಬಂದುಟು. ಮರದಡಿ ಕಲ್ಲು ಬಾಂಜಾರಗಳಲಿ ಇದ್ದವು ಬಯಲಿಗೆ ಬಂದು ಮುಳಿ ಮನೆ ಹಂಚಿನ ಮನೆ ಹೋಗಿ ಸ್ಲಾಬ್ ಬಂದುಟು. ಕುಲ್ಲು ಕುಡುಗೋಲುಂದ ಬೇಸಾಯ ಮಾಡಿಕಂಡಿದ್ದವುಕೆ ಇಂದು ಟ್ರಾಕ್ಟರ್, ಟಿಲ್ಲರ್, ಜೇಸಿಬಿ, ಹಿಟಾಚಿ. ಬುಡಕಟ್ಟು ಜೀವನ ದಾಟಿಕಂಡು ಕೂಡುಕಟ್ಟಲೆಗೆ ಬಂದು ಒಂದೇ ಮಾಡ್ ಅಡಿಲಿದ್ದ ಅವಿಭಕ್ತ ಕುಟುಂಬಂಗ ವಿಭಕ್ತ ಆಗೋಳೋ. ಮದುವೆ ಗಂಡ ಹೆಂಡ್ತಿ ನನ್ನ ಆಸ್ತಿ ಜಮ್ಮಾ ಯಾವುದು ಇಲ್ಲದ ಕಾಲ ಇತ್ತು. ಮನ್ಸರೊಟ್ಟಿಗೆ ಇವುಗ ಮಾತ್ರ ಅಲ್ಲ ಅಂವ ಪ್ರತಿಯೊಂದಕ್ಕು ಬಳಸುವ ಸಾಧನ ಸಲಕರಣೆಗ ಕೂಡ ಬದ್ಲಾಕ್ಕಂಡೆ ಬಂದೊ. ಅದು ಅಂವನ ಜೀವನ ವಿಧಾನ, ಮೌಲ್ಯ ನಂಬಿಕೆ ಆಚರಣೆಗಳ ಕೂಡ ಕಾಲ ಕಾಲಕ್ಕೆ ಬದ್ಲಿಸಿಕಂಡೆ ಬಂದುಟು. ಸಂಸ್ಕೃತಿ ನಾಗರೀಕತೆಗಳ ನಡಿಗೆನೆ ಹಾಂಗೆ. ಅದು ಮುಂದೆ ಮುಂದಕೆ ಹೋದೆ. ನಾವು ನಮ್ಮ ಕಾಲ ಅಷ್ಟೆ ಸತ್ಯ. ಮುಂದೆನ ತಲೆಮಾರು ಬೇರೆನೆ ಆಗಿದ್ದದೆ.

**ಸಂಸ್ಕೃತಿಗಳ ಪಾಲುಪಟ್ಟಿ:**

ಒಂದು ಖಂಡಂದ ಮತ್ತೊಂದು ಖಂಡಕ್ಕೆ, ಒಂದು ಕಡೆಂದ ಮತ್ತೊಂದು ಕಡೆಗೆ ಮನ್ಸರ ವಲಸೆ, ಅಲ್ಲಿನ ಭೂಗೋಳಿಕ ಪ್ರದೇಶಕ್ಕೆ ಹೊಂದಿಕಂಡು ಕಂಡುಕೊಂಡ ಬದುಕು ಸಂಸ್ಕೃತಿ. ಒಂದೊಂದು ಸಮುದಾಯಲಿ ಜಾತಿಲಿ ಅದರದೇ ರೀತಿಲಿ ಬೆಳ್ದು ಬಾತು.

ಏನೇ ಆದರು ಮನ್ಸರ ನಡುವೆ ಸಾಂಸ್ಕೃತಿಕ ಒಳ ಸಂಬಂಧಗ ನಿರಂತರ ಉಳ್ಕೊಂಡುಟ್ಟು. ಒಂದರ ಬುಟ್ಟು ಇನ್ನೊಂದಿಲ್ಲೆ. ನಾವು ಆಡುವ ಮಾತು ಅಂದರೆ ಭಾಷೆ, ತಿಂಡಿತಿನಿಸು, ಬಟ್ಟೆಬರೆ, ಹುಟ್ಟಿಂದ ಸಾಯುವ ತನಕದ ಕರ್ಮಂಗ, ಮದುವೆಗೆ ಅಗತ್ಯ ಕಾಣುವ ಬಳಿ, ಗೋತ್ರ ಎಲ್ಲಾವು ಒಂದೊಂದು ಜಾತಿಗೊಂದುಂತ ಕಂಡರೂ ಅದರೊಳಗೆಲ್ಲ ಸಾಮ್ಯತೆ ಉಟ್ಟು. ಹಂಗಾಗಿ ಯಾವುದಾದರು ಒಂದು ಜಾತಿಯವು ಈ ಭಾಷೆ ಈ ಆಚರಣೆ ನನ್ನ ಜಾತಿಗೆ ಮಾತ್ರ ಸೀಮಿತ ಎಂದರೆ ಅದಕ್ಕಿಂತ ಹೆಡ್ಡುತನ ಮುಠ್ಠಾಳತನ ಬೇರೊಂದಿಲ್ಲೆ.

ಇತಿಹಾಸಕಾರ ಪುರಾತತ್ವ ಶಾಸ್ತ್ರಜ್ಞನಾಗಿದ್ದ ಭಗತ್‌ಶರಣ ಉಪಾಧ್ಯಾಯರು ಹೇಳುವ ಮಾತುಗಳ ಅವರಂದಲೇ ಕೇಳಿ. "ಸಂಸ್ಕೃತಿ ಎಂಬುದು ಒಂದರದ್ದು ಅಥವಾ ಒಬ್ಬರಿಂದಾಗಿರದೆ ಅನೇಕರದಾಗಿರುತ್ತದೆ. ಅದರ ಅಭಿವ್ಯಕ್ತಿ ಬಹುಮುಖಿಯಾಗಿರುತ್ತದೆ. ಮಿಶ್ರ – ಸ್ವರೂಪದ್ದಾಗಿರುತ್ತದೆ... ಚೊಕ್ಕ ಸಮೀಕ್ಷೆಯಲ್ಲಿ ವಿಶಿಷ್ಟ ರಾಷ್ಟ್ರದ, ವಿಶಿಷ್ಟ ಸಮಾಜದ, ವಿಶಿಷ್ಟ ಸಂಸ್ಕೃತಿಯ ಕಲ್ಪನೆಯೇ ಬಹುಶಃ ಅವೈಜ್ಞಾನಿಕವೆಂದು ಕಂಡು ಬರುತ್ತದೆ. ವಾಸ್ತವವಾಗಿ, ಸಂಸ್ಕೃತಿ ಎಂಬುದು ಏಕದೇಶಿಯವಾಗಿರದೆ, ಅಂತರ್‌ದೇಶಿಯವು, ಅಂತಸ್ಸಾಮುದಾಯಿಕವು, ಅಂತರ್ ಸಾಮಾಜಿಕವು ಆಗಿರುತ್ತದೆ.

ಸಂಸ್ಕೃತಿಗಳ ಸ್ವಾವಲಂಬನೆಯ ವಾದಕ್ಕೆ ಯಾವುದೇ ಅರ್ಥವು ಇರುವುದಿಲ್ಲ. ಅವುಗಳ ಅಂತರಾವಲಂಬನೆಯ ವಾದ ಮಾತ್ರವೇ ವೈಜ್ಞಾನಿಕವಾದುದು.

ಹೌದು ಇದೆಲ್ಲ ಕಾಡುಲಿ ಗಿಡ ಮರಬಳ್ಳಿ ಒಂದಕ್ಕೊಂದು ಹೊಂದಿಕಂಡು ಸುತ್ತಿಕಂಡು ಬೆಳ್ದಾಂಗೆ. ಅವೆಲ್ಲ ಬೇರೆ ಬೇರೆಂತ ಕಂಡರು ಆಳಲಿ ಒಂದೇ ಮೂಲಂದ ಹೊರ್ಟವು. ಪರಸ್ಪರ ಸ್ವೀಕರಿಸಿಕಂಡು ಪರಿಷ್ಕರಿಸಿಕೊಂಡು, ಹೊಸತು ಕಂಡುಕಂಡೇ ಬೆಳ್ದೊಳೊ. ಹೊಸ್ತುನ ಸ್ವೀಕರಿಸದ ಸಂಸ್ಕೃತಿ ಬೇಗನೆ ಕೊಳ್ತದೆ ಕೊಚ್ಚೆ ಗುಂಡಿಯಾದೆ. ಹಂಗಾಗಿ ಸಂಸ್ಕೃತಿಲಿ ಮುಕ್ತತೆ ಹೊಸತನಂತೇಳುವಂತಹುದು ಕಾಲನ ಅಗತ್ಯ.



# ಯೋಗ

## ಕಿರು ಪರಿಚಯ

**ಹೊಳೆಕರೆ ಆರ್. ಚಿಂಗಪ್ಪ**

"ಈ ಜಗತ್ತು ಒಂದು ರಂಗಮಂದಿರ, ನಾವೆಲ್ಲರೂ ಪಾತ್ರಧಾರಿಗಳು, ದೇವರು ಇದರ ಸೂತ್ರಧಾರಿ" ಈ ಮಾತ್‌ನ ನಾವೆಲ್ಲಾ ಕೇಳಿಯೋಳೊ ಮತ್ತೆ ನಂಬಿಯೋಳೊ.

ಕೆಲವು ತತ್ವಜ್ಞಾನಿಗಳ ಪ್ರಕಾರ ದೇವರೇ ಅಣುವಾಗಿ ಪರಿವರ್ತನೆ ಹೊಂದಿ ಪಂಚಭೂತಗಳಾದ, ಪೃಥ್ವಿ, ನೀರು, ಬೆಂಕಿ, ಗಾಳಿ, ಆಕಾಶ ಆಗಿ ಒಂದು ಇಂದ್ರಿಯದ ಸಸ್ಯ ಆಗಿ, ಎರಡು ಇಂದ್ರಿಯದ ಹುಳ ಆಗಿ, ಮೂರು ಇಂದ್ರಿಯದ ಕೀಟ ಆಗಿ, ನಾಲ್ಕು ಇಂದ್ರಿಯದ ಸರಿಸೃಪವಾಗಿ, ಐದು ಇಂದ್ರಿಯದ ಪ್ರಾಣಿ–ಪಕ್ಷಿ, ಮನುಷ್ಯ ಆಗಿ ತಾನೇ ರಂಗಮಂದಿರವಾಗಿ, ತಾನೇ ಪಾತ್ರಧಾರಿ ಮತ್ತು ಸೂತ್ರಧಾರಿ ಆಗುಟ್ಟು.

ಕೆಲವೇ ಕೆಲವು ತತ್ವಜ್ಞಾನಿಗಳಿಗೆ ಮಾತ್ರ ಈ ಅನುಭವ ಸಿಕ್ಕಿಟ್ಟು. ನಮ್ಮೆಗ್ ಯಾಕೆ ಸಿಕ್ಕಿಲ್ಲೇ? ನಮಿಗೆಲ್ಲವುಕ್ಕೂ ಗೊತ್ತುಟ್ಟು, ಸೃಷ್ಟಿಯ ಎಲ್ಲಾ ಜೀವಿಗಳಲಿ ಮನುಷ್ಯಂಗೆ ಮಾತ್ರ ಆರನೇಯ

ಇಂದ್ರಿಯ ಇರ್ದುಂತ. ಆರನೇಯ ಇಂದ್ರಿಯನ ಯಾರು ಎಚ್ಚರಗೊಳಿಸಿಯೋಳೊ ಅವ್ಕೆ ಮಾತ್ರ ಈ ಅನುಭವ ಸಿಕ್ಕಿದೆ. ನಮ್ಮಲ್ಲಿ ಆರನೇಯ ಇಂದ್ರಿಯ ನಿದ್ದೆ ಮಾಡ್ತಾವುಟ್ಟು. ನಮ್ಮ ಜೀವನದ ಗುರಿಯು ಆರನೇಯ ಇಂದ್ರಿಯನ ಎಚ್ಚರ ಮಾಡುದು. ಇದ್ಕೇ ಹಿಂದಿನ ಕಾಲಲಿ ಮೋಕ್ಷ ಪಡೆಯುದೂಂತ ಹೇಳ್ತಾ ಇದ್ದೋ.

ನಾವು ಏನಾದರೂ ಸಾಧಿಸಕುತಾದರೆ ಒಂದು ಗುರಿ ಬೇಕು, ಗುರು ಬೇಕು. ಗುರುಗೆ ವಿಧೇಯರಾಗಿ ಎಲ್ಲಾ ತಿಳ್ಕಂಡು ಅವು ಹೇಳ್ದ ರೀತೀಲಿ ಸಾಧನೆ ಮಾಡಿರೆ ನಾವು ಗುರಿ ಮುಟ್ಟುವೆ.

ಭಾರತದ ತತ್ವಶಾಸ್ತ್ರದ ಪ್ರಕಾರವೂ, ಮನುಷ್ಯನ ಜೀವನದ ಗುರಿ ನಾಲ್ಕು ಪುರುಷಾರ್ಥ ಸಾಧನೆ ಮಾಡುದು. ಧರ್ಮ, ಅರ್ಥ, ಕಾಮ, ಮೋಕ್ಷ, ಇವೇ ಆ ನಾಲ್ಕು ಪುರುಷಾರ್ಥಗ. ನಾವು ಯಾವುದೇ ಒಂದು ಗುರಿ ಸಾಧಿಸೋಕಾದರೆ ಎರಡು ರೀತಿಯ ಯೋಜನೆ ಮಾಡಿಕೊಂಡಿರಕ್ಕು. ಒಂದು ಅಲ್ಪಾವಧಿ ಯೋಜನೆ ಇನ್ನೊಂದು ದೀರ್ಘಾವಧಿ ಯೋಜನೆ. ದೀರ್ಘಾವಧಿ ಯೋಜನೆನ ಸಾಧಿಸಕುತಾದರೆ ಅಲ್ಪಾವಧಿ ಯೋಜನೆ ಬೇಕೆ ಬೇಕು. ಜಗಲಿಗೆ ಹಾರಿಕೆ ಕಲ್ತರೆ ಮತ್ತೆ ಗಗನಕ್ಕೆ ಹಾರಕ್ಕ್. ನಮ್ಮ ಜೀವನಲಿ ಅಲ್ಪಾವಧಿ ಯೋಜನೆ– ಲೌಕಿಕ ಸಾಧನೆ, ದೀರ್ಘಾವಧಿ ಯೋಜನೆ– ಅಲೌಕಿಕ ಸಾಧನೆ. ಧರ್ಮ, ಅರ್ಥ, ಕಾಮ ಇವು ಲೌಕಿಕ ಸಾಧನೆಗ. ಮೋಕ್ಷ ಅಲೌಕಿಕ ಸಾಧನೆ. ಲೌಕಿಕ ಸಾಧನೆ ಜಗುಲಿ ಇದ್ದಂಗೆ. ಅಲೌಕಿಕ ಸಾಧನೆ ಗಗನ ಇದ್ದಂಗೆ.

ನಮ್ಮ ಹಿರಿಯವು ಲೌಕಿಕ ಗುರೀನ ಸಾಧಿಸೋಕ್ಕಾರೆ ಜೀವನನ ನಾಲ್ಕು ರೀತಿ ಮಾಡಿ, ನಾಲ್ಕು ನೀತೀನ ಪಾಲಿಸ್ತಾ ಇದ್ದೋ.

| ರೀತಿ | ನೀತಿ |
|---|---|
| 1. ಬ್ರಹ್ಮಚರ್ಯ | ಭಕ್ತಿಯೋಗ |
| 2. ಗೃಹಸ್ಥ | ಕರ್ಮಯೋಗ |
| 3. ವಾನಪ್ರಸ್ಥ | ರಾಜಯೋಗ |
| 4. ಸನ್ಯಾಸ | ಜ್ಞಾನಯೋಗ |

ಬ್ರಹ್ಮಚರ್ಯಲಿ, ವಿದ್ಯೆ ಕಲಿಯುವ ಮಕ್ಕ ಗುರುಹಿರಿಯರು ಹೇಳುವ ಒಳ್ಳೆಯ ಮಾತುಗಳ್ನ ಭಕ್ತಿ ಮೂಲಕ ಪಾಲಿಸಿಕ್ಕಂಡು ವಿದ್ಯೆ ಕಲೀತಾ ಇದ್ದೊ.

ಗೃಹಸ್ಥ ಜೀವನಲಿ, ಮನೆ ಯಜಮಾನ ಕರ್ಮಯೋಗದ ಮೂಲಕ ನ್ಯಾಯ ರೀತಿಂದ ಹಣ ಸಂಪಾದನೆ ಮಾಡಿ ತನ್ನ ಸಂಸಾರ ಮತ್ತೆ ಸಮಾಜನ ಕಾಪಾಡಿಕ್ಕಂಡು ಬರ್ತಾಯಿದ್ದೊ.

ವಾನಪ್ರಸ್ಥಲಿ, ಮಕ್ಕ ಸ್ವತಂತ್ರರಾಗಿ ಜೀವನ ಮಾಡುವ ಮಟ್ಟಕ್ಕೆ ಬಾಕನ ಮನೆ ಯಜಮಾನ ಕಾಡಿಗೆ ಹೋಗಿ ರಾಜಯೋಗ ಪಾಲಿಸ್ಕಂಡು ಆರನೇಯ ಇಂದ್ರಿಯನ ಎಚ್ಚರ ಮಾಡಿಕೊಳ್ಳುತ್ತಿದ್ದೊ.

ಸನ್ಯಾಸ ಧರ್ಮಲಿ, ತಾನು ವಾನಪ್ರಸ್ಥಲಿ ಸಂಪಾದಿಸಿದ ವಿದ್ಯೆಂದ ಸಮಾಜಕ್ಕೆ ಒಳ್ಳೆಯ

ಸಲಹೆ ನೀಡಿ ಒಂದು ಆರೋಗ್ಯವಂತ ಸಮಾಜನ ನಿರ್ಮಾಣ ಮಾಡ್ತಾ ಇದ್ದೊ.

ಸನ್ಯಾಸ ಜೀವನಂತೇಳಿರೆ ಮನೆಯೆಲ್ಲಾ ಬುಟ್ಟು ಮಠಕ್ಕೆ ಹೋದು ಅಲ್ಲ. ತಾನು ಸಮಾಜಲಿ ಇದ್ದುಕೊಂಡು ತಾನು ಕಲ್ತ ವಿದ್ಯೆನೆಲ್ಲಾ ಸಮಾಜಕ್ಕೆ ನೀಡುದೆ ಸನ್ಯಾಸಿಯ ಕರ್ತವ್ಯ.

ಕಂಪ್ಯೂಟರ್ ಎಕ್ಸೆಲ್ ಪ್ರೋಗ್ರಾಮಲಿ ನಾವು ಕಾಲಂಗಳನ್ನೆಲ್ಲಾ ಸೆಲೆಕ್ಟ್ ಮಾಡಿ ಫಾರ್ಮುಲಾ ಕೊಟ್ರೆ ಹೆಂಗೆ ಆಟೋಮ್ಯಾಟಿಕ್ ಆಗಿ ಉತ್ತರ ಬಂದದೆ ಹಂಗೆ ನಾವು ಜೀವನಲಿ ಈ ನಾಲ್ಕು ರೀತಿ, ನಾಲ್ಕು ನೀತಿಯ ಫಾರ್ಮುಲಾ ಪಾಲಿಸಿರೆ ಉತ್ತರಾಂತೇಳುವ ಮೋಕ್ಷ ಆಟೋಮ್ಯಾಟಿಕ್ ಆಗಿ ಸಿಕ್ಕಿದೆ.

**ಧರ್ಮ, ಅರ್ಥ, ಕಾಮ, ಮೋಕ್ಷ ಇದರ ಅರ್ಥ:–**

ಮನುಷ್ಯ ವರ್ತಮಾನ ಕಾಲದಲ್ಲಾಗಲೀ ಭವಿಷ್ಯದಲ್ಲಾಗಲಿ, ತನಗಾಗಲಿ ಪರರಿಗಾಗಲಿ, ಶರೀರಕ್ಕಾಗಲಿ, ಮನಸ್ಸಿಗಾಗಲಿ ಯಾವುದೇ ರೀತಿಯ ನೋವುಂಟು ಮಾಡದೆ ನೈತಿಕವಾಗಿ ಹಣ ಸಂಪಾದನೆ ಮಾಡಿ, ನೈತಿಕವಾಗಿ ತನ್ನ ಆಸೆಗಳೆನ್ನೆಲ್ಲಾ ಪೂರೈಸಿಕೊಳ್ಳುವುದು ಮತ್ತು ಸಮಾಜಕ್ಕೆ ತನ್ನಿಂದ ಕೈಲಾದಷ್ಟು ಸಹಾಯ ಮಾಡುವುದು. ಇದರ ಪ್ರತಿಫಲವೇ ಮೋಕ್ಷ.

ಇದೆಲ್ಲಾ ಪಂಡ್‌ನ ಕಾಲದ ಮಾತ್‌ಗ. ಈಗ ಕಾಲ ಬದಲಾಗುಟ್ಟು. ಇದನ್ನೆಲ್ಲಾ ಮಾಡಿಕ್ಕಂಡು ಕೂರಿಕ್ಕೆ ಆದೆಯಾ? ಇದು ನಮ್ಮೆಲ್ಲರ ಪ್ರಶ್ನೆ.

ನಮ್ಮ ಮನಸ್‌ಗೆ ಗೊತ್ತುಟ್ಟು, ನಮ್ಮ ಹಿರಿಯವು ಹೇಳ್‌ದೆಲ್ಲ ಸತ್ಯಾಂತ. ಈಗ ನಾವು ಅವರ ರೀತಿ ಮಾಡಿಕೆ ಆದುಲ್ಲೆ. ಏಕೆಂತೇಳಿರೆ ಕಾಲ ಬದಲಾಗುಟ್ಟು. ನಮ್ಮ ಜೀವನ ಕ್ರಮ ಬದಲಾಗುಟ್ಟು. ನಮ್ಮ ಅಭ್ಯಾಸಗ ಮನಸ್ಸುಂದ ದೂರ ಹೋಗು ಬುಟ್ಟುಟು. ಮನಸ್ಸು ಮತ್ತೆ ಅಭ್ಯಾಸ ಇವಕ್ಕೆ ಒಂದಕ್ಕೊಂದು ಹೊಂದಾಣಿಕೆ ಇಲ್ಲೆ. ಮನಸ್ಸು ಮತ್ತು ಅಭ್ಯಾಸನ ಒಂದಕ್ಕೊಂದು ಹೊಂದಾಣಿಕೆ ಮಾಡೊಕ್ಕಾದರೆ ನಾವು ನಮ್ಮ ಜೀವನಲಿ ಯೋಗನ ಅಳವಡಿಸಿ ಕಣಕ್ಕು.

ಯೋಗ :– ಶರೀರ, ಮನಸ್ಸು, ಆತ್ಮ, ಸಮಾಜ ಮತ್ತೆ ಪ್ರಕೃತಿ ಇವುಗಳ ಮಧ್ಯೆ ಸಾಮರಸ್ಯ ಉಂಟು ಮಾಡುವ ಸಾಧನ.

ಪ್ರಾಚೀನ ಭಾರತದ ಮಹರ್ಷಿ ಪತಂಜಲಿ ಯೋಗನ ನಮ್ಮ ಜೀವನಲಿ ಅಳವಡಿಸಿ ಕಣಿಕ್ಕೆ ಸುಲಭದ ಮಾರ್ಗನ ಹಾಕಿ ಕೊಟ್ಟೊಳೊ. ಅವ್ ಯೋಗನ ಎಂಟು ಭಾಗ ಮಾಡಿ ಅಷ್ಟಾಂಗ ಯೋಗಾಂತ ಪ್ರಸಿದ್ಧಿ ಮಾಡಿಂಯೋಳೊ. ಅದನ್ನ ರಾಜಯೋಗಂತೇಳಿಯೂ ಕರ್ದವೆ. ಆ ಎಂಟು ಭಾಗಗ ಯಾವುದುಂತೇಳಿರೆ :–

1. ಯಮ 2. ನಿಯಮ 3. ಪ್ರಾಣಯಾಮ 4. ಆಸನ 5. ಪ್ರತ್ಯಾಹಾರ 6. ಧಾರಣ 7. ಧ್ಯಾನ 8. ಸಮಾಧಿ.

1) ಯಮ 2) ನಿಯಮ: ಮನುಷ್ಯಂಗೆ ಜೀವನಲಿ ನೈತಿಕ ಪಾಠ ಕಲ್ತು ಆಧ್ಯಾತ್ಮದ ಕಡೆಗೆ ಹೋಗುವ ದಾರೀನ ಯಮ ನಿಯಮ ಕಲಿಸಿಕೊಟ್ಟದೆ.

3. ಆಸನ: ನಾವು ಏನನ್ನಾದರೂ ಸಾಧಿಸೋಕ್ಕಾದರೆ ನಮ್ಮ ಶರೀರ ಗಟ್ಟಿಯಾಗಿರಕ್ಕು. ಶರೀರನ ಗಟ್ಟಿಯಾಗಿ, ಆರೋಗ್ಯವಾಗಿ ಇಡುವ ಸಾಧನ ಆಸನ.

4. ಪ್ರಾಣಯಾಮ: ಕ್ರಮಬದ್ಧವಾಗಿ ಉಸಿರಾಡಿಕೊಂಡು ನಮ್ಮ ಮನಸ್‌ನ ದೃಢ ಮಾಡುದು ಪ್ರಾಣಯಾಮ.

5. ಪ್ರತ್ಯಾಹಾರ: ಪ್ರತ್ಯಾಹಾರ ಅಭ್ಯಾಸ ಮಾಡುದರುಂದ ನಮ್ಮ ಪಂಚೇಂದ್ರಿಯಗ ನಮ್ಮ ಹಿಡಿತಕ್ಕೆ ಬಂದವೆ.

6. ಧಾರಣ: ನಮ್ಮ ದೃಷ್ಟಿ ಮತ್ತೆ ಮನಸ್‌ನ ಒಂದೇ ವಸ್ತುನ ಮೇಲೆ ಸುಮಾರ್ ಹೊತ್ತ್ ನಿಲ್ಸಿಕೆ ಅಭ್ಯಾಸ ಮಾಡುದು ಧಾರಣ.

7. ಧ್ಯಾನ: ಮನಸ್‌ನ ಒಂದೇ ಕಡೆ ನಿಲ್ಸಿಕೆ ಅಭ್ಯಾಸ ಆದ ಮೇಲೆ ಅದನ್ನ ದೇವರ ಮೇಲೆ ನಿಲ್‌ಸುದು ಧ್ಯಾನ.

8. ಸಮಾಧಿ: ನಮ್ಗೆ ಮನಸ್ ಇರುವಂಗೆ ಆಕಾಶಕ್ಕೂ ಮನಸ್ಸು ಉಟ್ಟು. ಅದೇ ದೇವರ ಮನಸ್ಸು. ನಾವ್ ಧ್ಯಾನ ಮಾಡ್ತಾ ಮಾಡ್ತಾ ನಮ್ಮ ಮನಸ್ಸ್ ದೇವರ ಮನಸ್ಸಿನ ಜೊತೆ ಒಂದಾಗಿ ಬುಟ್ಟದೆ. ಆರನೇ ಇಂದ್ರಿಯ ಎಚ್ಚರ ಆದೆ. ಇದೇ ಸಮಾಧಿ. ಈ ಸ್ಥಿತಿ ಎಲ್ಲೋ ಕೋಟಿಗೊಬ್ಬಂಗೆ ಸಿಕ್ಕುದೇನೋ!!

ಒಂದು ಚಪ್ಪರಕ್ಕೆ ನಾಲ್ಕ್ ಕಂಬ ಇದ್ದರೆ ಹೆಂಗೆ ಗಟ್ಟಿಯಾಗಿ ನಿತ್ತದೆಯೋ ಹಂಗೆ ಮಕ್ಕಳಿಗೆ ನಾಲ್ಕ್ ತರದ ವಿದ್ಯಾಭ್ಯಾಸ ಕ್ರಮ ಬೇಕು. ಆಗಲೇ ಸಮಾಜ ಸರಿಯಾಗಿ ನಿಲ್ಲುದು ಆ ನಾಲ್ಕ್ ವಿದ್ಯೆಗ (1) ಭಾಷೆ ಕಲಿಯದು (2) ಉದ್ಯೋಗಲಿ ಪರಿಣಿತಿ (3) ನೈತಿಕತೆ (4) ಆಧ್ಯಾತ್ಮ.

ಭಾಷೆ ಮತ್ತೆ ಉದ್ಯೋಗಲಿ ಪರಿಣಿತಿನ ಈಗ ಶಾಲೆ ಕಾಲೇಜ್‌ಗಳ್ಲಿ ಕಲ್‌ಸುವೆ ನೀತಿ ಪಾದ ಮತ್ತೆ ಆಧ್ಯಾತ್ಮ ಪಾಠಗಳ್‌ಂದ ಈಗನ ಮಕ್ಕ ವಂಚಿತರಾಗೋಳೊ.

ನೀತಿ ಪಾಠ ಮತ್ತೆ ಆಧ್ಯಾತ್ಮ ಪಾಠನ ಈಗಲೂ ಕಲಿಯುವ ಏರ್ಪಾಡ್ ಮಾಡಿಯೋಳೊ, ಸಮಾಜದ ಹಿತ ಬಯಸುವವು ಯೋಗ ತರಭೇತಿ ನೀಡ್‌ವ ಮುಖಾಂತರ ಈ ಕೊರತೆನೆ ನೀಗಿಸಿಯೊಳೋ.

ನಮ್ಗೆ ಪುರುಸೊತ್ತು ಇಲ್ಲದ ಜೀವನಲಿ ದಿನಾ ಬೆಳಿಗ್ಗೆ ಸ್ವಲ್ಪ ಸಮಯ ಯೋಗಕ್ಕೆ ಕೊಟ್ಟು ನಮ್ಮ ಜೀವನದ ಗುರಿಯ ಕಡೆ ಪೋಯಿ.

ದೇವರು ಎಲ್ಲವ್ಕೂ ಆರೋಗ್ಯ, ಆಯಸ್ಸು, ಐಶ್ವರ್ಯ, ಕೀರ್ತಿ ಮತ್ತೆ ಆತ್ಮಜ್ಞಾನ ನೀಡಲಿಂತೇಳಿ ನಾವೆಲ್ಲಾ ಹಾರೈಸನ.

# ಗೌಡ ಕನ್ನಡ/ಅರೆಬಾಸೆ

ಪ್ರೊ. ಕೆ. ಕುಶಾಲಪ್ಪ ಗೌಡ

## ೧. ವ್ಯಾಪ್ತಿ–ಪ್ರದೇಶ

ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವ ಭಾಗ, ಕೇರಳಕ್ಕೆ ಸೇರಿದ ಕಾಸರಗೋಡು ಜಿಲ್ಲೆಯ ಪೂರ್ವಭಾಗ, ಕೊಡಗು ಜಿಲ್ಲೆಯ ಪಶ್ಚಿಮ ಭಾಗದಲ್ಲಿ ತಮ್ಮದೇ ಆದ ವಿಶಿಷ್ಟ ಸಂಪ್ರದಾಯ ಮತ್ತು ಕುಲಧರ್ಮವನ್ನು ಆಚರಿಸುತ್ತಿರುವ ಸಭ್ಯ ಕೃಷಿಕರೂ, ಶ್ರಮಜೀವಿಗಳೂ ಆದ ಜನಾಂಗವೇ ಗೌಡರೆಂದು ಹೆಸರು ಪಡೆದವರು. ಇವರು ವಲಸೆ ಬಂದವರೇ? ಎಲ್ಲಿಂದ ಬಂದರು? "ಗೌಡ" ಪದದ ಅರ್ಥವೇನು? ಎಂದು ಸ್ಪಷ್ಟವಾಗಿ ಹೇಳಲು ಆಧಾರಗಳೇನೂ ಇಲ್ಲ. ಕೆಲವರು ಊಹಾ ಮಾತ್ರದಿಂದ ಕೆಲವು ಅಭಿಪ್ರಾಯಗಳನ್ನು ಅಭಿವ್ಯಕ್ತಿಗೊಳಿಸಿದ್ದಾರೆ. ಆ ಪ್ರಕಾರ ಇವರು ಐಗೂರು ಸೀಮೆಯಿಂದ (ಸಕಲೇಶಪುರದ ಸಮೀಪ) ಪಶ್ಚಿಮಾಭಿಮುಖವಾಗಿ ಹೊರಟು ಗಟ್ಟವಿಳಿದು ಬಂದು ಒಂದು ಶಾಖೆ ದಕ್ಷಿಣಾಭಿಮುಖವಾಗಿ ಕೊಡಗು ಜಿಲ್ಲೆಗೆ ಹರಡಿ ಕೊಂಡರು. ತಾವು ನೆಲಸಿದ ಜನವಸತಿಯಿಲ್ಲದೆಡೆ ಕಾಡನ್ನು ಕಡಿದು ಕೃಷಿಭೂಮಿಯನ್ನಾಗಿ ಮಾಡಿ, ಬೇಸಾಯ ಮಾಡಲು ತೊಡಗಿದರು. ಕಾಲಕ್ರಮದಲ್ಲಿ ಭೂಮಾಲಿಕರಾದರು. ದಕ್ಷಿಣ ಕನ್ನಡ ಭಾಗದಲ್ಲಿ ಮೊದಲೇ ಜನವಸತಿಯಿದ್ದು, ಸ್ಥಳೀಯರೇ ಭೂಮಾಲೀಕರಾಗಿದ್ದುದರಿಂದ ಆಗುಂತಕರಾಗಿ ಬಂದವರಿಗೆ ಮೇಲೆ ಹೇಳಿದಂತೆ ಅನೇಕರಿಗೆ ಸ್ವತಂತ್ರವಾದ ಭೂಮಾಲಿಕ ರಾಗುವ ಸೌಲಭ್ಯ ದೊರೆಯಲಿಲ್ಲ. ಅವರು ದೊಡ್ಡ ದೊಡ್ಡ ಹಿಡುವಳಿಗಳಿದ್ದ ಧನಿಕರಿಂದ ಭೂಮಿಯನ್ನು ಗೇಣಿಗೆ ಪಡೆದು ಕೃಷಿ ಕಾರ್ಯಗಳನ್ನು ಮಾಡುವವರಾದರು. ಬಹಳ ಕಾಲ

ದವರೆಗೆ ಈ ವ್ಯವಸ್ಥೆಯೇ ನಡೆಯಿತು. ಕೊಡಗಿನ ಅರಸರು ದೂರದಿಂದ ಬಂದ ಜನರು ಕಾಡನ್ನು ಕಡಿದು ಭೂಮಿಯನ್ನು ಬೇಸಾಯಕ್ಕೆ ಅನುಗೊಳಿಸುವುದನ್ನು ಪ್ರೋತ್ಸಾಹಿಸುತ್ತಿದ್ದರು. ಆರಂಭದಲ್ಲಿ ಅವರಿಗೆ ಅಗತ್ಯವಾದ ಎಲ್ಲ ಸಹಾಯಗಳನ್ನು ಕೊಡುತ್ತಿದ್ದರು.

**೨. ಸಾಮಾಜಿಕ**

ದಕ್ಷಿಣ ಕನ್ನಡ ಜಿಲ್ಲೆಯ ಕಡೆಗೆ ಬಂದ ಗೌಡರು ಸ್ಥಳೀಯ ಪ್ರಮುಖ ಭಾಷೆಯಾದ ತುಳುವಿನಿಂದ ಪ್ರಭಾವಿತರಾಗಿ, ಕಾಲಕ್ರಮದಲ್ಲಿ ಅದನ್ನೇ ತಮ್ಮ ಮಾತೃ ಭಾಷೆಯನ್ನಾಗಿ ಸ್ವೀಕರಿಸಿದರು. ಇದು ತೀರಾ ಸಹಜ. ಅಮೇರಿಕಾಕ್ಕೆ ವಲಸೆ ಬಂದ ಯುರೋಪಿನವರು ಬೇರೆ ಮಾತೃ ಭಾಷೆಗಳನ್ನಾಡುವವರು ಎರಡನೆ ತಲೆ ಮಾರಿಗಾಗುವಾಗ ಸ್ಥಳೀಯ ಪ್ರಧಾನ ಭಾಷೆಯಾದ ಇಂಗ್ಲೀಷನ್ನೆ ಮಾತೃ ಭಾಷೆಯನ್ನಾಗಿ ಸ್ವೀಕರಿಸಿದರು. ತಮ್ಮ ಭಾಷೆಯನ್ನು ಬದಲಾಯಿಸಿಕೊಂಡರೂ ಗೌಡರು ತಮ್ಮ ಸಂಸ್ಕೃತಿಯನ್ನು ಬದಲಿಸಲಿಲ್ಲ. ಶೃಂಗೇರಿಯ ಜಗದ್ಗುರುಗಳ ಮಾರ್ಗದರ್ಶನದಂತೆ ತಮ್ಮ ಸಾಮಾಜಿಕ ರೀತಿನೀತಿಗಳನ್ನು ರೂಪಿಸಿಕೊಂಡರು. ಕಟ್ಟೆಮನೆ ಗೌಡರು, ಮಾಗಣೆ ಗೌಡರು, ಊರು ಗೌಡರು ಮುಂತಾದ ವಿವಿಧ ಶ್ರೇಣಿಯ ಅಧಿಕಾರಸ್ಥರು ಗೌಡರ ಸಾಮಾಜಿಕ ನಡವಳಿಕೆಗಳನ್ನು ನಿಯಂತ್ರಿಸುತ್ತಿದ್ದರು. ಮದುವೆ, ಸಾವು ಮುಂತಾದ ಸಂದರ್ಭಗಳಲ್ಲಿರುವ ವಿಶಿಷ್ಟ ನಿಯಮಾವಳಿಗಳಿಗೆ ಚ್ಯುತಿ ಬಾರದಂತೆ ಇವರು ನೋಡಿಕೊಂಡು ನಡೆಸುತ್ತಾರೆ. ಈ ಸಾಂಸ್ಕೃತಿಕ ರೂಪಗಳೆಲ್ಲ ತುಳುಭಾಷೆಯವರಿಗೂ, ಅರೆ ಬಾಸೆಯವರಿಗೂ ಸಮಾನವಾಗಿವೆ.

**೩. ಕುಟುಂಬಗಳು–ಗೋತ್ರಗಳು**

ಗೌಡರು ಹತ್ತು ಕುಟುಂಬ ಹದಿನೆಂಟು ಗೋತ್ರಗಳಿಗೆ ಸೇರಿದರೆಂದು ಕರೆದುಕೊಂಡು, ಪಿತೃಪ್ರಧಾನ ಕುಟುಂಬ ವ್ಯವಸ್ಥೆಯುಳ್ಳವರು. ಕುಟುಂಬಗಳು ಹತ್ತು ಆಗಿದ್ದು, ಬಳಿಗಳು ಹದಿನೆಂಟಾಗಲು ಕಾರಣವೇನೆಂಬ ಪ್ರಶ್ನೆಯೇಳುತ್ತದೆ. ಕಾಲಾನುಕ್ರಮದಲ್ಲಿ ಬೇರೆ ಜಾತಿಗೆ ಸೇರಿದ್ದ ಜನರನ್ನು ತಮ್ಮ ಜನಾಂಗದೊಳಗೆ ಸೇರಿಸಿಕೊಂಡುದರಿಂದ ಹೀಗಾಗಿರಬಹುದು ಎಂದು ಊಹೆ ಮಾಡಬೇಕಾಗುತ್ತದೆ. ಕೆಲವು ಬಳಿಗಳು ಬೇರೊಂದು ಬಳಿಗೆ ಕೂಡು ಬಳಿಯೆಂದಿದೆ. ಅಂದರೆ ಇವೆರಡು ಬಳಿಗಳು ಒಂದೇ ಎಂಬ ಭಾವನೆ. ಒಂದೇ ಗೋತ್ರ ಅಥವಾ ಬಳಿಗಳಿಗೆ ಸೇರಿದ ಗಂಡು ಹೆಣ್ಣುಗಳೊಳಗೆ ವಿವಾಹ ಸಂಬಂಧ ಸಾಧ್ಯವಿಲ್ಲ. ಇದು ಕೂಡುಬಳಿಗೂ ಅನ್ವಯಿಸುವ ನಿಯಮ. ಬಳಿ ಅಥವಾ ಗೋತ್ರದ ವ್ಯವಸ್ಥೆಯಿರುವುದು ಈ ಗೌಡರಲ್ಲಿ ಮಾತ್ರ. ಗಟ್ಟದ ಮೇಗಣ, ಮೈಸೂರು ಕಡೆಯ ಒಕ್ಕಲಿಗ ಗೌಡರು ಈ ಒಕ್ಕಲಿಗ ಗೌಡರೊಡನೆ ದಕ್ಷಿಣ ಕನ್ನಡ ಮತ್ತು ಕೊಡಗಿನ ಗೌಡರು ವಿವಾಹ ಸಂಬಂಧಗಳನ್ನು ಬೆಳೆಸುವುದು ತೀರಾ ಇತ್ತೀಚಿನ ದಿನಗಳಲ್ಲಿ ಮಾತ್ರ.

**೪. ಗೌಡ ಕನ್ನಡ ಪ್ರಯೋಗ:**

ಪೂರ್ವ ವಲಯದ ಗೌಡರು ಕನ್ನಡದ ಒಂದು ಪ್ರಬೇಧವನ್ನು ಮಾತಾಡುತ್ತಾರೆ. ಪಶ್ಚಿಮದ ಗೌಡರು ಸ್ಥಳೀಯವಾದ ತುಳು ಮಾತೃಭಾಷೆಯವರಾಗಿದ್ದಾರೆ. ಪ್ರೊ. ಮರಿಯಪ್ಪ ಭಟ್ಟರು ಬರೆದ ಒಂದು ಸಂಪ್ರಬಂಧದಲ್ಲಿ ಗೌಡರ ಮಾತೃಭಾಷೆಯಾದ ಕನ್ನಡವನ್ನು "ಗೌಡ ಕನ್ನಡ" ಎಂದು ಕರೆದಿದ್ದರು ಉಪಭಾಷೆ (dialects)ಗಳನ್ನು ಆ ಭಾಷೆಯನ್ನು ಮಾತನ್ನಾಡುವ ಜನರ ಜಾತಿಯ ಅಂಕಿತದಿಂದಲೇ ಗುರುತಿಸುವ ರೂಢಿಗನುಸರಿಸಿ, ಉದಾ: ಹವ್ಯಕ ಕನ್ನಡ, ಕುರುಬ ಕನ್ನಡ ಎಂಬಂತೆ "ಗೌಡ ಕನ್ನಡ" ವೆಂಬ ಹೆಸರನ್ನೇ ನಾನು ಬಳಸಿದೆ.

ಇದರ ಭಾಷಿಕ ಅಧ್ಯಯನವನ್ನು (Linguistic study) ಪುಸ್ತಕ ರೂಪದಲ್ಲಿ ಅಣ್ಣಾಮಲೈ ವಿಶ್ವವಿದ್ಯಾನಿಲಯದಿಂದ ಪ್ರಕಟಿಸಿದಾಗ ಆ ಪುಸ್ತಕಕ್ಕೂ "ಗೌಡ ಕನ್ನಡ"ವೆಂದೇ ಶೀರ್ಷಿಕೆ ಕೊಟ್ಟೆ.

Gowda Kannada
By Dr. K.Kushalappa Gowda
Annamalai University ; Annamalainagar India 1970

ಈ ಹೆಸರನ್ನು ಗೌಡರಿಗೆ ಅನ್ವಯಿಸಿ ಹೇಳುವಲ್ಲಿ ಒಂದು ತೊಂದರೆಯಿದೆ. ಅಂದರೆ ಎಲ್ಲ ಗೌಡರೂ ಇದೇ ಉಪಭಾಷೆಯನ್ನು ಬಳಸುವುದಿಲ್ಲ. ತುಳು ಮಾತಾಡುವ ಗೌಡರೂ ಇದ್ದಾರೆಂದು ಮೊದಲೇ ಹೇಳಿದೆ. ಹವ್ಯಕರಲ್ಲಾದರೆ, ಎಲ್ಲ ಪ್ರದೇಶಗಳ ಹವ್ಯಕರೂ ಆ ಕನ್ನಡ ಪ್ರಬೇಧವನ್ನೇ ಮಾತಾಡುತ್ತಾರೆ. ಆದುದರಿಂದ ಅದರ ಹೆಸರಿನ ಬಳಕೆಗೆ ಅಡ್ಡಿಯೇನೂ ಇಲ್ಲ. ಗೌಡ ಕನ್ನಡ ಪ್ರದೇಶದಲ್ಲಿರುವ ಅನ್ಯ ಭಾಷಾವ್ಯಕ್ತಿಗಳು ಈ ಪ್ರಬೇಧವನ್ನು ಅರೆಬಾಸೆ, ಅರೆಗನ್ನಡ ಎಂದೆಲ್ಲ ಕರೆಯುತ್ತಾರೆ. ಭಾಷೆಯನ್ನು ಅರ್ಧ, ಕಾಲು ಎಂದು ವಿಭಜಿಸಿಲು ಹೇಗೆ ಸಾಧ್ಯ? ಭಾರತದಲ್ಲಿ ಭಾಷೆಗಳನ್ನು ಸಂಸ್ಕೃತ, ಪ್ರಾಕೃತ ಅಪಭ್ರಂಶ ಮತ್ತು ಪೈಶಾಚಿಕ ಎಂದು ಹೆಸರಿಸಿ, ಕೊನೆಯದಕ್ಕೆ ಪೂರ್ಣ ಸ್ಥಾನವಿಲ್ಲದೆ ಅರ್ಧವೆಂದು ಗಣಿಸಿ, ಮೂರುವರೆ ಭಾಷೆಗಳೆಂದು ಹಿಂದಿನ ಪಂಡಿತರು ಕರೆದಿದ್ದಾರೆ. ಈ ಪ್ರದೇಶದಲ್ಲಿ ಮರಾಠಿ ವರ್ಗಕ್ಕೆ ಸೇರಿದವರು ಮಾತಾಡುವ ಭಾಷೆಯನ್ನು "ಅರೆ ಮಾರಾಟಿ" ಎಂದು ಕರೆಯುವ ವಾಡಿಕೆಯಿದೆ. ಇದು ಒಂದು ರೀತಿಯ ಕುಚೋದ್ಯ ಅಥವಾ ಬೇರೆ ಮಾತಿನವರ ದಬ್ಬಾಳಿಕೆಯ ಪ್ರತೀಕವೋ ಎಂದಾಗುತ್ತದೆ. ಇದಕ್ಕಾಗಿ ಗೌಡ ಕನ್ನಡ ಎಂದು ಕರೆದರೆ, ಸುಮಾರು ಅರ್ಧಾಂಶದಷ್ಟು ಗೌಡರು ತುಳು ಮಾತಿನವ ರಾಗಿರುವುದರಿಂದ ಇದಕ್ಕೆ ತೊಡಕುಂಟಾಗುತ್ತದೆ. ಇತ್ತೀಚೆಗೆ ಕರ್ನಾಟಕ ಸರಕಾರವು ಈ ಉಪಭಾಷೆಗೆ ಅರೆಬಾಸೆಯ ಅಕಾಡೆಮಿ ಒಂದನ್ನು ರಚಿಸಿರುವುದರಿಂದ ಇನ್ನು ಮುಂದೆ "ಗೌಡ ಕನ್ನಡ" ಎಂಬುದನ್ನು ಬಿಟ್ಟು 'ಅರೆಬಾಸೆ' ಎಂಬ ಹೆಸರೇ ಸ್ಥಿರವಾಗಿ ಉಳಿಯುವಂತಾಗಿದೆ.

### ೫. ಅರೆಬಾಸೆ–ಪ್ರಾಚೀನತೆ:

ನಾನು ಈ ಉಪಭಾಷೆಯ ಲಿಂಗ, ವಚನ ಪ್ರತ್ಯಯಗಳ ಅಧ್ಯಯನ ಮಾಡಿ ಒಂದು ಸಂಪ್ರಬಂಧವನ್ನು ಪ್ರಕಟಿಸಿದ್ದೆ. "Gender distinction in Gowda Kannada" Studies in Indian linguistics- Prof Emeneau 61st Birthady volume, Ed: By. Krishnamurti, Deccan College, Poona and Annamalai University; 1968.

ಎಲ್ಲಾ ದ್ರಾವಿಡ ಭಾಷೆಗಳ ಲಿಂಗ ವ್ಯವಸ್ಥೆಗಳನ್ನು ಅಧ್ಯಯನ ಮಾಡಿದಾಗ ನನ್ನ ಪ್ರಬಂಧವನ್ನು ಸೇರಿಸಿಕೊಂಡು ನನ್ನ ಮಿತ್ರರು ತೌಲನಿಕ ಅಧ್ಯಯನ ಮಾಡಿದರು. ಅವರ ಅಧ್ಯಯನದ ಪ್ರಕಾರ ಗೌಡರು ಬಳಸುವ ಕನ್ನಡ ಪ್ರಭೇಧದ (=ಅರೆಬಾಸೆಯ) ಲಿಂಗವಚನ ವ್ಯವಸ್ಥೆ ಉತ್ತರ ದ್ರಾವಿಡ ವಿಭಾಗದ ಬ್ರಾಹೂಯಿಯ ಅನಂತರದ ಹಂತಕ್ಕೆ ಸೇರುತ್ತದೆಂದು ತಿಳಿದುಬಂದಿದೆ. (S.V.Shanmugam, Annamalai University; Annamalainagara) ಅತೀ ಪೂರ್ವದಲ್ಲಿದ್ದಿರಬಹುದಾದ ದ್ರಾವಿಡ ವರ್ಗದ ಭಾಷೆಗಳ ಮೂಲರೂಪವನ್ನು ಪ್ರಾಗ್ದ್ರಾವಿಡ (Proto Dravidian) ಎಂದು ಕರೆಯುತ್ತಾರೆ. ಇದು ಮುಂದೆ ಮೂರು ಕವಲಾಗಿ ಉತ್ತರ, ಮಧ್ಯ ಮತ್ತು ದಕ್ಷಿಣ ದ್ರಾವಿಡವೆಂದು ವಿಭಾಗವಾಗುತ್ತದೆ. ಕುರುಖ್, ಮಾಲ್ತೊ ಬ್ರಾಹೂಯಿ ಎಂಬವು ಉತ್ತರ ದ್ರಾವಿಡ ಭಾಷಾ ವರ್ಗಕ್ಕೆ ಸೇರಿವೆ. ಬ್ರಾಹೂಯಿ ಈಗನ ಪಾಕಿಸ್ತಾನದ ಬಲೂಚಿ ಪ್ರದೇಶದ ಜನರ ಆಡುಭಾಷೆಯಾಗಿದೆ. ಪ್ರಾಗ್ದ್ರಾವಿಡ ಮೊದಲ ಹಂತ: ಉತ್ತರ, ಮಧ್ಯ ಮತ್ತು ದಕ್ಷಿಣ ಎಂದು ಕವಲೊಡೆದು ಎರಡನೆ ಹಂತ, ಕಾಲಮಾನದ ದೃಷ್ಟಿಯಿಂದ ಹೇಳುವುದಿದ್ದರೆ ಮೊದಲ ಹಂತ ಅತಿ ಪ್ರಾಚೀನ–ಕೆಲವು ಸಾವಿರ ವರ್ಷಗಳ ಹಿಂದಿನದಾಗಿರಬಹುದು. ಒಂದಾಗಿದ್ದುದು ಮೂರಾಗಿ ಕವಲೊಡೆಯಲೂ ಸಾವಿರದ ಲೆಕ್ಕದ ವರ್ಷಗಳಾಗಿರಬಹುದು. ಈ ಹಂತದ ಭಾಷೆಯೊಡನೆ ಸಾಮೀಪ್ಯ ತೋರುವುದೆಂದರೆ ಆ ಉಪಭಾಷೆಯ ಚರಿತ್ರೆಯೂ ಕೆಲವು ಸಾವಿರ ವರ್ಷಗಳಷ್ಟು ಹಿಂದೆ ಹೋಗಬಹುದೆಂದು ನಾವು ಊಹಿಸಬಹುದು. ಆದುದರಿಂದ ಅರೆಬಾಸೆ ಇಂದು ನಿನ್ನೆಯದಲ್ಲ; ಎಷ್ಟೊ ಹಿಂದಿನಿಂದಲೆ ಬೆಳೆದು ಬಂದಿದೆ. ಇದನ್ನಾಡುವ ಜನರು ಇದನ್ನು ಜತನದಿಂದ ಇಷರ್ಟವರೆಗೆ ಉಳಿಸಿಕೊಂಡು ಬಂದಿದ್ದಾರಲ್ಲ! ಎಂಬುದು ನಮ್ಮನ್ನು ಬೆರಗಾಗಿಸುವ ಸಂಗತಿ. ಸಾಂಸ್ಕೃತಿಕವಾದ ಈ ಅಮೂಲ್ಯವಾದ ಶಬ್ದ ಸಂಪತ್ತನ್ನು ಗಳಿಸಿ ಉಳಿಸಿ ನಮಗೆ ಬಳುವಳಿಯಾಗಿ ಬಿಟ್ಟುಹೋದ ಆ ಹಿರಿಯರು, ನಾಗರಿಕತೆಯಲ್ಲಿ ಹಿಂದುಳಿದವರಾಗಿದ್ದಿರಬಹುದು. ನಾಡನ್ನು ಕಟ್ಟಿ ಆಳದೆ, ಇನ್ನೊಬ್ಬರ ಮೇಲೆ ದಬ್ಬಾಳಿಕೆಗೆ ಮಾಡದೆ ಎಲೆ ಮರೆಯ ಕಾಯಂತೆ ಬದುಕಿ ಈ ಪ್ರಪಂಚವನ್ನು ಬಿಟ್ಟು ಹೋಗಿರಬಹುದು. ಒಂದೇ ಒಂದು ಶಬ್ದವನ್ನು ಹೊಸತಾಗಿ ಉಂಟು ಮಾಡಲು ನಾವು ಶಕ್ತರಲ್ಲ ಎಂದು ಪರಿಭಾವಿಸಿದಾಗ, ನಾವು ಆ ಹಿಂದಿನವರನ್ನು ಭಕ್ತಿಯಿಂದ ನಮಿಸಬೇಕು ಎಂದಾಗುತ್ತದೆ. ಇದು ಮಾತೃಭಾಷೆಯಾಗುಳ್ಳ ಇಂದಿನವರು ಆಧುನಿಕತೆಯ ಫ್ಯಾಷನ್ನಿಗೊಳಗಾಗಿ ಇದನ್ನು ಬಿಟ್ಟು ಶಿಷ್ಟ ಕನ್ನಡವನ್ನು ಮನೆ ಮಾತಾಗಿ ಬಳಸುವುದು ದೊಡ್ಡ ಅಪರಾಧವೆಂದು ಪರಿಗಣಿಸಬೇಕು. ಇದು ಕಣ್ಮರೆಯಾಗಿ ಹೋದರೆ ಎಷ್ಟೋ

ವರ್ಷಗಳಿಂದ ಬೆಳೆದು ಬಂದ ಅಮೂಲ್ಯ ಸಾಂಸ್ಕೃತಿಕ ಸಂಪತ್ತನ್ನು ನಾವು ಮತ್ತೆ ಗಳಿಸಲಾಗದಂತೆ ಕಳಕೊಂಡಂತಾಗುತ್ತದೆ. ಈ ದಾರಿದ್ರ್ಯಾವಸ್ಥೆಗೆ ನಾವು ಒಳಗಾಗಬಾರದು. ಈಗ ಎಲ್ಲ ಕನ್ನಡಿಗರಿಗೂ ಮಾನ್ಯವಾದ, ಕರ್ನಾಟಕದ ಎಲ್ಲೆಡೆಗಳಲ್ಲೂ ಬಳಕೆಯಲ್ಲಿರುವ ಕನ್ನಡಕ್ಕೆ ಈ ಉಪಭಾಷೆಗಳಲ್ಲಿ ಒಂದಾಗಿದ್ದು, ಕಾಲ ಕ್ರಮದಲ್ಲಿ ಕೆಲವಂಶಗಳನ್ನು ಸೇರಿಸಿ, ಕೆಲವಂಶಗಳನ್ನು ಕಳೆದು ಬದಲಾವಣೆಗೊಂದು ಈಗಿನ ಸ್ಥಿತಿಗೆ ತಲುಪಿದೆ. ರಾಷ್ಟ್ರಕೂಟ ಚಕ್ರವರ್ತಿಯಾಗಿದ್ದ ನೃಪತುಂಗ ಅಮೋಘ ವರ್ಷನ ಕಾಲದಲ್ಲಿ (ಕ್ರಿ.ಶ.814–880) ವಿಸ್ತಾರವಾಗಿದ್ದ ಕರ್ನಾಟಕದಲ್ಲಿ ಹಲವು ಕನ್ನಡದ ಪ್ರಭೇದಗಳಿದ್ದವೆಂದು 'ಕವಿರಾಜ ಮಾರ್ಗ' ವೆಂಬ ಕೃತಿಯಿಂದ ತಿಳಿಯುತ್ತದೆ. ಒಂಕುಂದ, ಕೊಪಣನಗರ, ಪುಲಿಗೆರೆ, ಕಿಸುವೊಳಲ್ ಎಂಬ ಪಟ್ಟಣಗಳ ನಡುವಣನಾಡೆ ಕನ್ನಡದ ತಿರುಳ್ (=ತಿರುಳ್ಗನ್ನಡದ ಪ್ರದೇಶ) ಎಂದು ಆಕೃತಿಯ ಕರ್ತೃ ಹೇಳಿದ್ದಾನೆ. ಹಳಗನ್ನಡದಲ್ಲಿ ಕೃತಿರಚನೆ ಮಾಡಿದ ಕವಿಗಳೆಲ್ಲ ಪುಲಿಗೆರೆಯ ತಿರುಳ್ಗನ್ನಡದಲ್ಲಿ ತಾವು ಕಾವ್ಯರಚನೆ ಮಾಡುತ್ತಿದ್ದೇವೆಂದು ಹೇಳಿಕೊಂಡಿದ್ದಾರೆ. ಈಗ ನಾವು ತಿರುಳ್ಗನ್ನಡವೆಂಬುದು ಈಗನ ಕರ್ನಾಟಕದ ಉತ್ತರ ಮೇರೆಯ ಕನ್ನಡ ಪ್ರಭೇಧವನ್ನಲ್ಲ. ಆಗಿನ ಕರ್ನಾಟಕದ ದಕ್ಷಿಣ ಮೇರೆಯಲ್ಲಿದ್ದ ಪ್ರಭೇದವೇ ಕೆಲವು ಬೆಳವಣಿಗೆಗೊಳಗಾಗಿ ಈಗಿನ ಶಿಷ್ಟ ಕನ್ನಡ(Standard Kannada) ಎಂದಾಗಿದೆ. ಅರೆಬಾಸೆಯಂತೆ ಒಂದು ಕಾಲದಲ್ಲಿ ಈ ಶಿಷ್ಟ ಕನ್ನಡವೆನ್ನುವುದರ ಹಳೆಯ ರೂಪವೂ ಒಂದು ಉಪಭಾಷಾ ಪ್ರಭೇದವೇ ಆಗಿತ್ತು. ಆ ಪ್ರದೇಶದಲ್ಲಿದ್ದ ಕನ್ನಡಿಗರು ಪ್ರಬಲರಾಗಿ, ನಾನಾ ಚಟುವಟಿಕಗಳಿಂದ ಕೂಡಿದವರಾಗಿದ್ದುದರಿಂದ ಅವರು ಬಳಸುವ ಕನ್ನಡಕ್ಕೂ ಪ್ರಾಶಸ್ತ್ಯ ಬಂದು, ಅದು ಪ್ರಮುಖ ಭಾಷೆಯೆಂದು ಎಲ್ಲರಿಗೂ ಮಾನ್ಯವಾದ ಭಾಷೆಯೆಂದಾಯ್ತು.

**೬. ಅರೆಬಾಸೆಯ ಸ್ವರೂಪ ವಿವೇಚನೆ**

ಇನ್ನು ಅರೆಬಾಸೆಯ ಸ್ವರೂಪವನ್ನು ನೋಡೋಣ. ಸ್ವರ ಮತ್ತು ವ್ಯಂಜನಗಳು ಒಂದು ಭಾಷೆಯ ಮೂಲ ಘಟಕಗಳು. ಅವುಗಳ ವಿಶಿಷ್ಟ ಸಂಯೋಜನೆಯಿಂದ ಅರ್ಥವತ್ತಾದ ಘಟಕಗಳಾಗಿ 'ಶಬ್ದ' ಅಥವಾ 'ಪದ'ಗಳೆನ್ನಿಸಿಕೊಳ್ಳುತ್ತವೆ. ಈ ಪದಗಳಲ್ಲಿ ಕೆಲವು ವ್ಯಕ್ತಿ ಅಥವಾ ವಸ್ತು ಇಲ್ಲವೆ ಸ್ಥಳವನ್ನು ಕುರಿತು ಹೇಳುತ್ತವೆ. ಕೆಲವು ಕೆಲಸವನ್ನು ಮಾಡುವವುಗಳನ್ನು ನಿರ್ದೇಶಿಸುತ್ತವೆ. ಆ ಕೆಲಸ ಈಗ ನಡೆಯುತ್ತದೆಯೋ, ಹಿಂದೆ ನಡೆದಿದೆಯೋ ಅಲ್ಲ ಇನ್ನು ನಡೆಯಬೇಕಾಗಿದೆಯೋ ಎಂಬುದನ್ನು ಸೂಚಿಸುವ ವ್ಯವಸ್ಥೆಯೂ ಭಾಷೆಯಲ್ಲಿದೆ. ಹೀಗೆ ಈ ಪದಗಳಿಗೆ, ಪದಭಾಗಗಳಿಗೆ ತಮ್ಮದೇ ಆದ ವಿಶಿಷ್ಟ ಹೆಸರುಗಳಿದ್ದು, ಉದಾ:ನಾಮಪದ, ಸರ್ವನಾಮ, ಕ್ರಿಯಾಪದ, ವಿಶೇಷಣ, ವರ್ತಮಾನ, ಭೂತ, ಭವಿಷ್ಯತ್ಕಾಲಕಗಳು, ಲಿಂಗವಚನ ಪ್ರತ್ಯಯಗಳು ಎಂದಿತ್ಯಾದಿಯಾಗಿ ಇವುಗಳು ವಿಶಿಷ್ಟವಾಗಿ ಪರಸ್ಪರ ಸಂಬಂಧಿಸಿರುವುದನ್ನು ಶಾಸ್ತ್ರೀಯವಾಗಿ ತಿಳಿಸಿಕೊಡುವ ವ್ಯವಸ್ಥೆಯನ್ನು ಪಾರಿಭಾಷಿಕವಾಗಿ, ಆ ಭಾಷೆಯ ವ್ಯಾಕರಣವೆನ್ನುತ್ತೇವೆ. ಪ್ರತಿಯೊಂದು

ಬಳಕೆಯಲ್ಲಿರುವ ಭಾಷೆಗೆ ಅದರದೇ ಆದ ವ್ಯಾಕರಣವೊಂದಿರುತ್ತದೆ. ಬರಹ ರೂಪದಲ್ಲಿ ಅದು ಇಲ್ಲವೆಂದಾದರೂ ಅದು ಅಲಿಖಿತ ರೂಪದಿಂದಿರುತ್ತದೆ. ಆ ಭಾಷೆಯನ್ನಾಡುವವನು ಓದು ಬರಹ ಗೊತ್ತಿಲ್ಲದವನೇ ಆದರೂ ಅವನ ಮಾತೃಭಾಷೆಯ ಮಟ್ಟಿಗೆ ಅವನೊಬ್ಬ ಒಳ್ಳೆಯ ವೈಯಾಕರಣಿಯೇ ಆಗಿದ್ದಾನೆ. ಆದರೆ ಅವನು ಅದನ್ನು ವಿವರಿಸಲು ಮಾತ್ರ ಶಕ್ತನಲ್ಲ. ಒಬ್ಬನು ಎಳವೆಯಲ್ಲೇ ತನ್ನ ತಾಯ್ತಂದೆಯವರಿಂದ ಮತ್ತು ತನ್ನ ಜತೆಗಾರರಿಂದ ಆ ಭಾಷೆಯನ್ನು ಕಲಿತುಕೊಳ್ಳುತ್ತಾನೆ. ಆ ಭಾಷೆಯ ವ್ಯಾಕರಣ ವ್ಯವಸ್ಥೆ ಅವನಲ್ಲಿ ಅಂತರ್ಗತವಾಗಿ ಹೋಗಿರುತ್ತದೆ. ಭಾಷೆಯನ್ನು ಒಂದು ಯಂತ್ರಕ್ಕೆ ಹೋಲಿಸುವುದಾದರೆ, ಅವನಿಗೆ ಆ ಯಂತ್ರದ ವಿವಿಧಾಂಗಗಳು ಸೇರಿ ಅವೆಲ್ಲ ಹೇಗೆ ಕೆಲಸ ಮಾಡುತ್ತವೆಂದು ವಿವರಿಸಲಾರನಾದರೂ ಅದನ್ನಾತ ಲೀಲಾಜಾಲವಾಗಿ ಬಳಸಬಲ್ಲ.

**೭. ಅರೆಬಾಸೆಯ ವ್ಯಾಕರಣ–ಸ್ಥೂಲ ವಿವರಣೆ**

ವ್ಯಾಕರಣದ ಮೊದಲ ಮೆಟ್ಟಿಲಾಗಿ ಆ ಭಾಷೆಯ ಧ್ವನಿಗಳ ಪರಿಶೀಲನೆ ನಡೆಯುತ್ತದೆ.

**೭.೧ ಧ್ವನಿ–ಧ್ವನಿಮಾ:** ಧ್ವನಿಗಳಲ್ಲಿ ಎರಡು ವಿಧ:(1) ಸ್ವರಗಳು (2) ವ್ಯಂಜನಗಳು.

**೭.೧.೧ ಅರೆಬಾಸೆಯ ಧ್ವನಿಗಳ ವಿವರಣೆ:**

ಸ್ವರಗಳು

| ಹ್ರಸ್ವ | | | ದೀರ್ಘ | |
|---|---|---|---|---|
| *i* | *i* | *u* | *i:* | *u:* |
| *e* | *a* | *a* | *e:* | *a:* |
| | *a* | | *a:* | |

ಅಂತಾರಾಷ್ಟ್ರೀಯ ಧ್ವನಿಲಿಪಿಯನ್ನನುಸರಿಸಿ ಇಂಗ್ಲೀಷ್ ಮೂಲದ ಲಿಪಿಯನ್ನು ಇಲ್ಲಿ ಅಳವಡಿಸಿದೆ. ಈ ಸ್ವರಗಳನ್ನು ಉಚ್ಚರಿಸುವಾಗ ನಾಲಗೆಯ ತುದಿ, ಉನ್ನತ, ಮಧ್ಯ ಮತ್ತು ನಿಮ್ನವೆಂಬ ಸ್ಥಳಗಳಲ್ಲಿರುವುದನ್ನು ಸಾಪೇಕ್ಷವಾಗಿ ಪ್ರಥಮ ಸಾಲು ತೋರಿಸುತ್ತದೆ. ಮೂರನೆಯ (ಕೊನೆಯ) ಸಾಲು ನಾಲಗೆಯ ಬುಡದ ಸ್ಥಾನವನ್ನು, ಇವೆರಡರ ಮಧ್ಯದ ಸ್ಥಾನ ನಾಲಗೆಯ ಮಧ್ಯದ ಸ್ಥಿತಿಯನ್ನು ತೋರಿಸುತ್ತದೆ.

ಅರೆಬಾಸೆಯಲ್ಲಿ ಶಿಷ್ಟ ಕನ್ನಡದಲ್ಲಿರುವ ಸ್ವರಗಳಿಗಿಂತ ಹೆಚ್ಚು ಸ್ವರಗಳಿವೆ. ಅವು i,a,e ಮತ್ತು o ಎಂಬುವುಗಳು. ಎರಡು ಧ್ವನಿಗಳು ಒಂದೇ ಪರಿಸರದಲ್ಲಿ ಬಂದು ಅರ್ಥ ವೈದೃಶವನ್ನು ತೋರಬಲ್ಲವಾದರೆ ಆ ಧ್ವನಿಗಳನ್ನು ಧ್ವನಿಮಾಗಳೆಂದು ಆಧುನಿಕ ಭಾಷಾವಿಜ್ಞಾನದ ಪರಿಭಾಷೆಯಲ್ಲಿ ಕರೆಯುತ್ತಾರೆ. ಉದಾ: ಕರಿ–ಗರಿ ಎಂಬ ಪದಗಳಲ್ಲಿ ಕ್ ಮತ್ತು ಗ್ ಒಂದೇ ಪರಿಸರದಲ್ಲಿ (=ಪದಾದಿಯಲ್ಲಿ) ಮತ್ತು ರಿ ಎಂಬುದರ ಪೂರ್ವದಲ್ಲಿ ಬರುತ್ತವೆ. ಎರಡೂ ಪದಗಳಲ್ಲಿ ಬೇರೆ ಬೇರೆ ಅರ್ಥಗಳು ಬರುವುದಕ್ಕೆ ಒಂದು 'ಕ್' ಮತ್ತು 'ಗ್' ಆಗಿರುವುದೇ ಕಾರಣ. ಹಾಗೆ ಕನ್ನಡದಲ್ಲಿ ಕ್ ಮತ್ತು ಗ್ ವನ್ನು ಧ್ವನಿಮಾಗಳೆಂದು ಕರೆಯುತ್ತಾರೆ. ಈ ರೀತಿಯಾಗಿ ಮೇಲೆ ಹೇಳಿದ ಸ್ವರಗಳನ್ನು ಸಂಕೇತಿಸಿರುವ ಸಂಜ್ಞೆಗಳು

ಅರೆಬಾಸೆಯ ಸ್ವರಧ್ವನಿಮಾ (vowel phonemes) ಎಂದಾಗುತ್ತವೆ. ಶಿಷ್ಟ ಕನ್ನಡದೊಡನೆ ಹೋಲಿಸಿದರೆ ನಾಲ್ಕು ಸ್ವರಧ್ವನಿಮಾಗಳು ಅರೆಬಾಸೆಯಲ್ಲಿ ಹೆಚ್ಚಿವೆ ಎಂದಾಯಿತು.

### ೭.೧.೨ ಅರೆಬಾಸೆಯಲ್ಲಿರುವ ವ್ಯಂಜನ ಧ್ವನಿಮಾಗಳು

**ವರ್ಗೀಯ ವ್ಯಂಜನಗಳು:** ಬಾಯಿಯ ಮೇಲ್ಭಾಗದ ಅಂಗುಳಿನ ವಿವಿಧ ಬಿಂದುಗಳಿಗೆ ನಾಲಗೆಯ ತುದಿ (tip of the tongue) ಅಥವಾ ಬುಡ (Root of the tongue) ತಾಗಿ ಶ್ವಾಸಕೋಶದಿಂದ ಹರಿದು ಬರುತ್ತಿರುವ ಗಾಳಿಗೆ ಕ್ಷಣಿಕ ತಡೆಯೊಡ್ಡಿ, ಧ್ವನಿಪೆಟ್ಟಿಗೆಯಲ್ಲಿ ಕಂಪನವುಂಟಾಗಿ ಅಥವಾ ಆಗದೆ ಉಂಟಾಗುವ ಧ್ವನಿ ಸಮುಚ್ಛಯವನ್ನು ವ್ಯಂಜನಗಳೆನ್ನುತ್ತೇವೆ. ಇವುಗಳನ್ನು ಓಷ್ಠ್ಯ, ದಂತ್ಯ, ತಾಲವ್ಯ, ಮೂರ್ಧನ್ಯ, ಕಂಠ, ಗಲೀಯವೆಂದು ವಿಭಜಿಸಲಾಗುತ್ತದೆ. ಈ ಕೆಳಗಿನವುಗಳು ಅಂತಹ ವ್ಯಂಜನಗಳು ಧ್ವನಿಮಾಗಳಾಗಿರುವವುಗಳು.

p ñ ñ o c k ಕಠಿಣ ಸ್ಪರ್ಶ ವ್ಯಂಜನಗಳು

b d d j g ಮೃದು ಸ್ಪರ್ಶ ವ್ಯಂಜನಗಳು

m n n n° ಅನುನಾಸಿಕ ವ್ಯಂಜನಗಳು

w y

s h

*l* *l* ಅವರ್ಗೀಯ ವ್ಯಂಜನಗಳು

r

### ೮. ಶಿಷ್ಟ ಕನ್ನಡದೊಡನೆ ಹೋಲಿಕೆ ವ್ಯತ್ಯಾಸಗಳು:

ಶಿಷ್ಟ ಕನ್ನಡದೊಡನೆ ಹೋಲಿಸಿದರೆ ಅರೆಬಾಸೆಯ ಕೆಲವು ವೈಶಿಷ್ಟ್ಯಗಳನ್ನು ತಿಳಿಯಬಹುದು.

1)ಶಿಷ್ಟ (=ಗ್ರಾಂಥಿಕ)ಕನ್ನಡದಲ್ಲಿ ಸಂಸ್ಕೃತ ಪದಗಳ ಬಳಕೆಯಿಂದಾಗಿ ಲಿಪಿಯಲ್ಲಿ ಅಥವಾ ವರ್ಣ ಮಾಲೆಯಲ್ಲಿ ಕಠಿಣ ಮತ್ತು ಮೃದುವರ್ಣಗಳ ಸಾಲಿನಲ್ಲಿ ಮಹಾಪ್ರಾಣ ವ್ಯಂಜನಗಳು (ಖ, ಘ, ಛ, ಝ, ಠ, ಢ, ಷ, ಥ, ಧ, ಫ, ಭ) ಇವೆ. ಅರೆಬಾಸೆಯಲ್ಲಿ ಅವುಗಳಿಲ್ಲ.

2)ಮೂಲ ಸಂಸ್ಕೃತ ರೂಪಗಳು ಮಹಾಪ್ರಾಣಗಳಿರುವ ಪದಗಳು ಅರೆಬಾಸೆಯಲ್ಲಿ ಬಳಕೆಯಾದರೂ ಅದರ ಮಹಾಪ್ರಾಣಾಕ್ಷರಗಳೆಲ್ಲ ಅಲ್ಪಪ್ರಾಣಗಳಾಗಿ ಸಹಜವಾಗಿ ಮಾರ್ಪಾಡಾಗುತ್ತವೆ. ಭಾಷಾ ಪಂಡಿತರು ಮಾತ್ರ ಮಹಾಪ್ರಾಣಗಳನ್ನು ಹಾಗೆಯೇ ಉಚ್ಚರಿಸಬಹುದು.

## ೯. ಕೆಲವು ಧ್ವನಿಗಳ ಉಚ್ಚಾರಣಾ ವಿಧಾನ.

w ಮತ್ತು yಗಳು ಉಚ್ಚರಣೆಯಾಗುವೆಡೆಯಲ್ಲಿ ತುಟಿಯಾಗಲೀ ನಾಲಗೆಯಾಗಲೀ ಉಚ್ಚಾರಣಾ ಸ್ಥಾನವನ್ನು ಸಂಪೂರ್ಣ ಮುಚ್ಚದೆ, ಸ್ವಲ್ಪ ಎಡೆಯಿರುವಂತೆ ಮಾಡಿ ಶ್ವಾಸಕೋಶದಿಂದ ಹೊರ ಬರುವ ಗಾಳಿಗೆ ಸ್ವಲ್ಪ ಮಾತ್ರ ತಡೆಯೊದಗಿದಂತಾಗಿ ಹೊರ ಹೋಗುತ್ತದೆ. s ಎಂಬುದನ್ನು ಉಚ್ಚರಿಸುವಾಗ ನಾಲಗೆಯ ತುದಿ ಮೇಲಿನ ಒಸಡಿಗೆ ಸಮೀಪ ನಿಂತು ಅಗಲ ಕಿರಿದಾದ ಎಡೆಯಿಂದ ಗಾಳಿ ಹೊರಹೋಗುವಂತಾಗುತ್ತದೆ. ನಾಲಗೆಯ ಮಧ್ಯಭಾಗ ಮೇಲೆದ್ದು ತಾಲುವಿನತ್ತ ಸ್ವಲ್ಪವೇ ಎಡೆಬಿಟ್ಟು ಗಾಳಿ ಹೊರಹೋಗುವಂತಾದರೆ ತಾಲವ್ಯ ಊಷ್ಮ (v) ಧ್ವನಿಯಾಗುತ್ತದೆ. ಅರೆಬಾಸೆಯಲ್ಲಿ ಇದು । s । ದ ಉಪಧ್ವನಿಯಾಗಿ, ನಿರ್ದಿಷ್ಟ ಸ್ಥಾನದಲ್ಲಿ, ಉದಾ–ಕ್ ವ್ಯಂಜನದ ಪರದಲ್ಲಿ ಮಾತ್ರ ಬರುತ್ತದೆ. ಉದಾ: ಸಾಕ್ಷಿ, ನಕ್ಷೆ, ರಿಕ್ಷಾ,ದ್ರಾಕ್ಷೆ. ಇವೆಲ್ಲಾ ಎರವಲು ಪದಗಳು, ದೇಶ್ಯವಲ್ಲ, ಅಂದರೆ ಅರೆಬಾಸೆಯ ಮೂಲದವುಗಳಲ್ಲ. ಗಲೀಯವಾದುದು. ಕಂಠ್ಯ ಸ್ಥಾನದಲ್ಲಿ ಶ್ವಾಸಕೋಶದಿಂದ ಈ ಗಾಳಿಯು ಹೊರಬರುವಾಗ ಕ್ಷಣಿಕ ಒತ್ತಡವನ್ನುಂಟುಮಾಡಿ ಧ್ವನಿಪೆಟ್ಟಿಗೆಯ ಸ್ವರತಂತಿಗಳ ಘರ್ಷಣೆಯಿಂದ ಹೊರ ಬರುವಾಗ h ಎಂಬ ಧ್ವನಿ ಕೇಳಿಸುತ್ತದೆ.

*l* ಮತ್ತು *ḷ* ಗಳ ಉಚ್ಚಾರಣೆಯಲ್ಲಿ ನಾಲಗೆಯ ತುದಿ ಮೇಲಿನ ಹಲ್ಲಿನ ಒಸಡಿಗೆ ತಾಗಿನಿಂತು ಶ್ವಾಸಕೋಶದಿಂದ ಬರುತ್ತಿರುವ ಗಾಳಿ ನಾಲಗೆಯ ಎರಡು ಬದಿಗಳಿಂದಲೂ ಹೊರಟು ಹೋದಾಗ *l*: ನಾಲಗೆಯ ತುದಿ ಇನ್ನಷ್ಟು ಮುಂದಕ್ಕೆ ಬಾಗಿ ಕಠಿಣ ತಾಲುವಿಗೆ ತಾಗಿ ನಿಂತು ಶ್ವಾಸಕೋಶದ ಗಾಳಿಯು ಮೊದಲು ಹೇಳಿದಂತೆ ಹೊರಟು ಹೋದರೆ ಉಂಟಾಗುವ ಧ್ವನಿ *l*: ಇವೆರಡನ್ನು ಪಾರ್ಶ್ವಗಾಮಿಗಳೆಂದು ಕರೆಯುತ್ತಾರೆ.

r ನಾಲಗೆಯ ತುದಿ ಕ್ಷಣಿಕವಾಗಿ ಮೇಲಿನ ಒಸಡಿನ ಅಂಚಿಗೆ ಶೀಘ್ರತಾಡನ ಮಾಡಿ ವೇಗವಾಗಿ ಕಂಪಿಸುವಾಗ ಉಂಟಾಗುವ ಧ್ವನಿ r . ಇದನ್ನು ಆಕಂಪಿತವೆಂದು ಕರೆಯುತ್ತಾರೆ.

## ೧೦. ಅನುನಾಸಿಕಗಳು:

ಶಿಷ್ಟ ಕನ್ನಡದಲ್ಲಿ m, n, ṅ ಎಂಬ ಮೂರು ಅನುನಾಸಿಕಗಳು ಮಾತ್ರ ಧ್ವನಿಮಾಗಳೆಂದು ಪರಿಗಣಿತವಾಗುತ್ತವೆ. ಅಕ್ಷರ ಮಾಲೆಯಲ್ಲಿ ಮಾತ್ರ ಞ ಮತ್ತು ಙ ಗಳು ಎಡೆ ಪಡೆಯುತ್ತವಾದರೂ ಅರ್ಥ ವೈದೃಶಗಳನ್ನು ತೋರಲು ಸಮರ್ಥಗಳಾಗಿಲ್ಲ. ಅರೆಬಾಸೆಯಲ್ಲಿ ಇವುಗಳು ಧ್ವನಿಮಾಸ್ಥಾನಗಳನ್ನು ಪಡೆಯುತ್ತವೆ. ಪದಮಧ್ಯದಲ್ಲಿ ದಿತ್ವರೂಪಗಳೂ ಕೆಲವು ಪದಗಳಲ್ಲಿ ಕಂಡು ಬರುತ್ತವೆ. ಉದಾ: ಹಞ=ಸ್ವಲ್ಪ ಕೊಞ್ಞೆ=ತೊದಲು ಮಾತು' ಕುಞ್ಞೆ=ಚಿಕ್ಕದು

ಮಙ್ಙ=ಮಗ; ನೊಙ್ಙ=ನೊಗ; ಬಙ್ಙ=ಭಂಗ, ಕಷ್ಟ.

## ೧೧. ಹಳಗನ್ನಡ ಪದಸ್ವರೂಪಗಳ ಉಳಿಕೆ :

### ೧೧.೧ ಸಬಿಂದುಕ ಅಬಿಂದುಕಗಳು :

ಚಾರಿತ್ರಿಕ ಬದಲಾವಣೆಯ ಕಾರಣದಿಂದ, ಶಿಷ್ಟ ಕನ್ನಡದಲ್ಲಿ ಪಕಾರವಿದ್ದ ಅನೇಕ ಪದಗಳಲ್ಲಿ ಪಕಾರ ಹಕಾರವಾಗಿ ಬದಲಾವಣೆ ಹೊಂದಿದೆ. ಇದು ಅರೆಬಾಸೆಯಲ್ಲೂ ನಡೆದಿದೆ. ಹಳಗನ್ನಡದಲ್ಲಿ ಹಿಂದೆ ದೀರ್ಘ ಸ್ವರಗಳ ಪರದಲ್ಲಿ ಅಥವಾ ಬಹುವಕ್ಷರವುಳ್ಳ ಪದಗಳಲ್ಲಿ ಎರಡನೆಯ ಅಕ್ಷರದ ಪರದಲ್ಲಿ ಬಿಂದು (=ಅನುನಾಸಿಕ)ಬರುವ ಅನೇಕ ಪದಗಳಿದ್ದುವು. ಹೊಸಗನ್ನಡದಲ್ಲಿ (=ಶಿಷ್ಟ ಕನ್ನಡದಲ್ಲಿ) ಬಿಂದು ಲೋಪವಾಗಿದೆ. ಆದರೆ ಅರೆಬಾಸೆಯಲ್ಲಿ ಇಂದೂ ಅನೇಕ ಪದಗಳು ಬಿಂದು (=ಅನುನಾಸಿಕ) ಯುಕ್ತವಾದ ಪದಸ್ವರೂಪಗಳು ಕಂಡು ಬರುತ್ತವೆ.

| **ಹಳಗನ್ನಡ** | **ಹೊಸಗನ್ನಡ** | **ಅರೆಬಾಸೆ** |
|---|---|---|
| ಬೆಳಂತಿಗೆ | ಬೆಳತಿಗೆ | ಬೆಣ್ತಕ್ಕಿ |
| ಎರಂಕೆ | ರೆಕ್ಕೆ | ರೆಂಕೆ |
| ಕಡುಂಬು | ಕಡುಬು | ಕಡ್ಂಬು |

| **ಹಳಗನ್ನಡ** | **ಹೊಸಗನ್ನಡ** | **ಅರೆಬಾಸೆ** |
|---|---|---|
| ಸೆರಂಗು | ಸೆರಗು | ಸೆರ್ಗ್ |
| ತೂಂಬು | ತೂಬು | ತೂಂಬು |
| ಸೀಂಟು | ಸೀಟು | ಚೀಂಟ್ |
| ಸೌಂಟು | ಸೌಟು | ಸೊವುಂಟ್ |

### ೧೧.೨ ಲ–ಳ ವ್ಯತ್ಯಯ:

ಹಳಗನ್ನಡದಲ್ಲಿ ಲಾಂತಗಳಾಗಿದ್ದ ಪದಗಳು ಹೊಸಗನ್ನಡದಲ್ಲಿ ಳಾಂತಗಳಾಗತೊಡಗಿದವು. ಇದನ್ನು ಕೇಶಿರಾಜ (12ನೇ ಶತಮಾನ) ನಿಷೇದಿಸಿ, ಆ ಪದಗಳು ಲಾಂತಗಳಾಗಿಯೇ ಇರಬೇಕೆಂದಿದ್ದ. ಆದರೆ ಅವನ ನಿಯಮವನ್ನು ಮೀರಿ, ಆ ಪದಗಳೆಲ್ಲವೂ ಕುಳಾಂತಗಳಾಗಿಯೇ ಪರಿವರ್ತಿಸಿದುವು. ಅರೆಬಾಸೆಯಲ್ಲಿ ಆ ಪದಗಳೆಲ್ಲ ಲಾಂತಗಳಾಗಿಯೇ ಉಳಿದವು.

| **ಹಳಗನ್ನಡ** | **ಹೊಸಗನ್ನಡ** | **ಅರೆಬಾಸೆ** |
|---|---|---|
| ಬೆರಲ್ | ಬೆರಳು | ಬೆರ್ಲ್ |
| ಕೊರಲ್ | ಕೊರಳು | ಕೊರ್ಲ್ |
| ಉರುಲ್ | ಉರುಳು | ಉರ್ಲ್ |

| | | |
|---|---|---|
| ಪರಲ್ | ಹರಳು | ಹರ್ಲ್ |

ನಿಜವಾಗಿ ಕುಳಾಂತಗಳಾಗಿದ್ದ ಪದಗಳೂ ಅರೆಬಾಸೆಯಲ್ಲಿ ಲಾಂತಳಾಗಿರುವುದನ್ನು ಕಾಣಬಹುದು. ಉದಾ: ಕರುಳ್ – ಕೂರ್ಲ್, ಮರಳು–ಮೊರ್ಲ್. ಈ ಬದಲಾವಣೆಗೆ ತುಳುವಿನ ಪ್ರಭಾವ ಬಹುಶ: ಕಾರಣವಿರಬೇಕು.

### ೧೨. ಲಿಂಗ–ವಚನ ಮುಂತಾಗಿ

ಅರೆಬಾಸೆ ಶಿಷ್ಟ ಕನ್ನಡಕ್ಕೆ ತೀರಾ ಭಿನ್ನತೆಯನ್ನು ತೋರುವುದು ಲಿಂಗ ವಚನ ವ್ಯವಸ್ಥೆಯಲ್ಲಿ. ಅರಬಾಸೆ ಪ್ರಥಮ ಪುರುಷ ಸರ್ವನಾಮದಲ್ಲಿ ಎರಡೇ ಲಿಂಗಗಳನ್ನು ಹೊಂದಿದೆ. (1) ಪುಲ್ಲಿಂಗ (2) ನಪುಂಸಕ ಅಥವಾ ಪುಲ್ಲಿಂಗೇತರ. ಶಿಷ್ಟ ಕನ್ನಡದಲ್ಲಿ ಸ್ತ್ರೀಲಿಂಗ ಪ್ರತ್ಯೇಕವಾಗಿದೆ.

| | ಪುಲ್ಲಿಂಗ | ನಪುಂಸಕ ಅಥವಾ ಪುಲ್ಲಿಂಗೇತರ |
|---|---|---|
| ಪ್ರ.ಪು.ಸ.ನಾ | ಅಂವ | ಅದ್ |
| | ಇಂವ | ಇದ್ |

### ೧೩. ಸ್ತ್ರೀಲಿಂಗ ಮತ್ತು ನಪುಂಸಕದ ಏಕೀಭವಿಸುವಿಕೆ:

ಸ್ತ್ರೀಲಿಂಗ ವಿವಕ್ಷೆಗೆ ಪ್ರತ್ಯೇಕ ಪ್ರತ್ಯಯ ಇಲ್ಲ. ಅದು ನಪುಂಸಕದೊಡನೆ ಅಂತರ್ಗತವಾಗಿದೆ. ಹೀಗಿದ್ದರೂ ನಾಮಪದದಲ್ಲಿ ಅಳ್ ಎಂಬ ಸ್ತೀಲಿಂಗ ಪ್ರತ್ಯಯ ಇತರ ಪ್ರತ್ಯಯಗಳ ಪೂರ್ವದಲ್ಲಿ ಬರುತ್ತದೆ.

ಮಜ್ಜ=ಮಗ (ಪುಂ) ಮಗ=ಮಗಳು (ಸ್ತ್ರೀ) ಮಗ ಎಂಬ ಸ್ತ್ರೀಲಿಂಗ ಸೂಚಿ ಪದದ ಪರದಲ್ಲಿ ಸ್ವರಾದಿ ಪ್ರತ್ಯಯಗಳು ಬರುವಾಗ ಈ ಪದಕ್ಕೆ ಅಳ್ ಎಂಬ ಪ್ರತ್ಯಯ ಆಗಮವಾಗುತ್ತದೆ.

ಮಜ್ಜ+ಅ (ಷಷ್ಠೀ ವಿಭಕ್ತಿ)– ಮಂಜನ: ಮಗ+ಅ(ಪ್ರ.ವಿ.) ಮಗಳ ಮಜ್ಜ+ಗೆ(ಚ.ವಿ) ಮಂಞಂಗೆ ಮಗ+ಇಗೆ– ಮಗಳಿಗೆ (ಚ.ವಿ)

ತೀರ ಇತ್ತೀಚಿನ ಬೆಳವಣಿಗೆಯಲ್ಲಿ ಅರೆಬಾಸೆಯ ಈ 'ಮಗ' (ಪುಂ) ಪದ ಶಿಷ್ಟ ಕನ್ನಡದ ಮಗ ಎಂಬ ಪದದೊಡನೆ ಏಕರೂಪ ಹೊಂದಿ ಗೊಂದಲಕ್ಕೆ ದಾರಿಯಾಗುವುದೆಂಬ ಕಾರಣಕ್ಕಾಗಿ ಆಧುನಿಕರು ಅರೆಬಾಸೆಯ ಮಗ ಎಂಬುದನ್ನು ಶಿಷ್ಟ ಕನ್ನಡದ 'ಮಗಳು' ಎಂಬ ರೂಪದಿಂದಲೇ ಪ್ರಯೋಗಿಸುತ್ತಾರೆ. ಅದೇ ರೀತಿ ಪ್ರ.ಪು.ಸ.ನಾದ ಅದ್ ಎಂಬ ಅರೆಬಾಸೆಯ ರೂಪವನ್ನು ಸ್ತ್ರೀಲಿಂಗಕ್ಕೆ ಅನ್ವಯಿಸಿ ಪ್ರಯೋಗಿಸುವುದು ಸ್ತ್ರೀಯರಿಗೆ ಅಗೌರವವೆಂಬ ಭಾವನೆಯಿಂದ 'ಅವ್ಳು' 'ಇವ್ಳು' ಎಂದು ಪ್ರಯೋಗಿಸುತ್ತಾರೆ ಆದರೆ ಈ ರೂಪಗಳನ್ನು ವಾಕ್ಯದಲ್ಲಿ ಕರ್ತೃ ಪದವಾಗಿ ಬಳಸಿದಾಗ ವಾಕ್ಯದ ಪೂರ್ಣ ಕ್ರಿಯ ಪದದ ರೂಪದಲ್ಲಿ ಕರ್ತೃ ಪದದ ಲಿಂಗ ವಚನ ಸೂಚಕ ಪ್ರತ್ಯಯ ಬರಬೇಕೆಂಬ ನಿಯಮಕ್ಕೆ ಭಂಗವುಂಟಾಗುತ್ತದೆ. ಉದಾ: ಮಗಳು ಹೋತು

(=ಮಗಳು ಹೋಯ್ತು). ಅವ್ವ' 'ಇವ್ವ' ಹೋತು (ಆವಳು/ಇವಳು ಹೋಯ್ತು) ಎಂಬ ಆಭಾಸ ರೂಪವುಂಟಾಗುತ್ತದೆ.

**೧೪. ವಾಕ್ಯದ ಕ್ರಿಯಾಪದದಲ್ಲಿ ಬರುವ ಲಿಂಗ-ವಚನ ಪ್ರತ್ಯಯ ವಿಚಾರ:**

ಕರ್ತೃಪದ ಪುಲ್ಲಿಂಗ ಏಕವಚನವಾಗಿರಲಿ ಅಥವಾ ನಪುಂಸುಕ ಏಕವಚನವಾಗಿರಲಿ ಕ್ರಿಯಾಪದದ ನಪುಂಸಕ ಏಕವಚನವೇ ಬರುತ್ತದೆ.

ಉದಾ: ಅಂವ (ಪುಂ)ಬಾತ್ (ಭೂತಕಾಲ ನಪುಂ)=ಅವನು ಬಂತು.

ಅದು (ನಪುಂ) ಬಂದದೆ (ವ.ಕಾಲ,॥ )=ಅದು ಬರುತ್ತದೆ.

ಅಂವ/ಅದ್ ಬಾದು (ಭವಿಷ್ಯತ್ಕಾಲ, ಪು.ನಪುಂ)=ಅವನು/ಅವ ಬರುವುದು)

**೧೫. ಉತ್ತಮ ಮತ್ತು ಮಧ್ಯಮ ಪುರುಷ ಸರ್ವನಾಮಗಳು**

**ಉತ್ತಮ ಪು.ಏಕ.ವ.** ನಾ ಬಂದೆ (ಭೂ.ಕಾ) ಬನ್ನೆ (ವ.ಕಾ) ಬಾವೆ (ಭ.ಕಾ)

**"ಬಹುವಚನ ರೂಪ,** ನಾವು ಬಂದೊ "ಬಂದವೆ" ಬಾವೆ"

ಬಂದೊ "ಬಾವೊ" ಬಾವೋ"

**ಮಧ್ಯಮ ಪು.ಏಕ.ವ.** ನೀ ಬಂದ "ಬಂದಿಯ" "ಬಾವ ನೀವು ಬಂದರಿ" "ಬಂದರೆ" "ಬಾವೋರಿ"

ಪ್ರಥಮ ಪುರುಷ ಸರ್ವ ನಾಮದಲ್ಲಿ ಮಾತ್ರ ಪುಲ್ಲಿಂಗ-ನಪುಂಸಕ ಸರ್ವನಾಮದ ಕರ್ತೃ ರೂಪದಲ್ಲಿ ಮಾತ್ರ ಕಂಡುಬರುವುದಾದರೂ ಆಖ್ಯಾತ ರೂಪ (ಕ್ರಿಯಾ)ದಲ್ಲಿ ಆ ವ್ಯತ್ಯಾಸವೂ ಇಲ್ಲ. ಬಹುವಚನದಲ್ಲಿ ಪುಲ್ಲಿಂಗ ಪುಲ್ಲೀಂಗೇತರ ವ್ಯತ್ಯಾಸವೂ ಇಲ್ಲ. ಅವು ಎಂದರೆ ಮನುಷ್ಯರು ಅಥವಾ ಮೃಗಗಳು ಯಾವುವೂ ಆಗಬಹುದು. ಹೀಗೆ ಇಲ್ಲಿ ಅರೆಬಾಸೆ ಶಿಷ್ಟಕನ್ನಡಕ್ಕಿಂತ ತೀರ ಭಿನ್ನವಾದ ವ್ಯಾಕರಣ ವ್ಯತ್ಯಾಸವನ್ನು ತೋರುತ್ತದೆ.

**ಅಡಿ ಟಿಪ್ಪಣಿಗಳು.**

1. **ಪೂವಪ್ಪ ಕಾಣಿಯೂರು** : ದಕ್ಷಿಣ ಕನ್ನಡ ಜಿಲ್ಲೆಯ ಗೌಡರ ಐನ್ ಮನೆಗಳು; ಪುಟ 252; **ಗೌಡ ಜನಾಂಗ ಇತಿಹಾಸ ಮತ್ತು ಸಂಸ್ಕೃತಿ**; ಸಂ. ಡಾ. ಕೆ.ಚಿನ್ನಪ್ಪ ಗೌಡ; ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ (ರಿ.) ಮಂಗಳೂರು, 2003, ಯದುಪತಿಗೌಡ, (ಪೊವೋಕ್ತ ಗ್ರಂಥ ಪು 299)
2. **ಡಾ. ಪುರುಷತ್ತೋಮ ಬಿಳಿಮಲೆ**: ಸುಳ್ಯ ಪರಿಸರದ ಗೌಡರು (ಮೇಲೆ ಉಲ್ಲೇಖಿಸಿದ ಪುಸ್ತಕ) ಇಂದಿಗೆ ಗೌಡರಲ್ಲಿ ಕೇವಲ 12 ಬಳಿಗಳು ಮಾತ್ರ ಅಸ್ತಿತ್ವದಲ್ಲಿವೆಯೆಂದು ಹೇಳಿ ಈ ಕೆಳಗಿನವುಗಳನ್ನು ಉಲ್ಲೇಖಿಸಿದ್ದಾರೆ.

1. ನಂದರ 2. ಬಂಗಾರ 3. ಹೆಮ್ಮನ 4 ಮೂಲರ 5. ನಾಯರ 6. ಚಾಲ್ಯರ 7. ಗುಂಡರ 8. ಕಬರ್ 9. ಚಿತ್ತರ 10. ಗೌಡರ 11. ಬಳಸನ್ನ 12. ಗೋಳಿ.

**ಯದುಪತಿ ಗೌಡ: ಗೌಡರು, ಜನಾಂಗ ಮತ್ತು ಕುಣಿತ,** ಪೊವೋಕ್ತ ಗ್ರಂಥದಲ್ಲಿ (ಪು.299)ರಲ್ಲಿ ಹದಿನೆಂಟು ಬಳಿಗಳನ್ನು ಗುರುತಿಸಿದದಾರೆ. 1. ನಂದರ 2. ಬಂಗಾರ 3. ಮೂಲರ 4

ಗುಂಡರ, 5. ಚಾಲ್ಯರ 6. ಚಿತ್ತರ, 7. ಕೆಲ್ಲರ, 8. ನಾಯರ 9. ಜತ್ತರ 10. ಕಬರು 11. ಗೌಡರ 12. ಕರ್ಂಬೆರ 13. ದೇವರ 14. ಬಳಸನ್ನ 15. ಪೆರ್ಬನ್ನ 16. ಪೆರ್ಗಡೆ 17. ಹೆಮ್ಮನ 18. ಲಿಂಗಾಯಿತ. ಈ ಬಳಿಗಳ ಹೆಸರುಗಳಲ್ಲಿ ಪ್ರಾದೇಶಿಕ ವ್ಯತ್ಯಾಸವಿದ್ದರೂ ಸಂಖ್ಯೆಯಲ್ಲಿ ಮಾತ್ರ ಹದಿನೆಂಟೇ ಬಳಿಗಳಿರುತ್ತವೆ ಎಂದಿದ್ದಾರೆ.

೩. ದಕ್ಷಿಣ ಕನ್ನಡದಲ್ಲಾಗಲೀ, ಉತ್ತರ ಕನ್ನಡ ಜಿಲ್ಲೆಯಲ್ಲಾಗಲಿ ಹವ್ಯಕರ ಮಾತು ಕನ್ನಡದ ಪ್ರಭೇದವೇ ಆಗಿರುವುದರಿಂದ 'ಹವ್ಯಕ ಕನ್ನಡ' ವೆಂದು ಹೇಳಲೇನೂ ತೊಂದರೆಯಿಲ್ಲ. ಈಗ ಹವ್ಯಕ ಕನ್ನಡವನ್ನು 'ಹವಿಗನ್ನಡ'ವೆಂದು ಕರೆದು ಇದರಲ್ಲಿ ಸಾಹಿತ್ಯ ಚಟುವಟಿಕೆಗಳು ಬಹಳ ಚುರುಕಿನಿಂದ ನಡೆಯುತ್ತಿವೆ. ಹೊಸಗನ್ನಡದ ಮೊತ್ತ ಮೊದಲ ನಾಟಕ 'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ' ವೆಂಬ ಕೃತಿ ರಚನೆಯಾದದ್ದು ಹವ್ಯಕ ಭಾಷೆಯಲ್ಲೇ ಎಂಬುದೂ ಗಮನಿಸತಕ್ಕ ವಿಷಯ.

೪. ಈ ಕನ್ನಡದ ಪ್ರಭೇದ (dialect)ದಲ್ಲಿ ಮಹಾಪ್ರಾಣಾಕ್ಷರಗಳು ಧ್ವನಿಮಾಗಳಾಗಿಲ್ಲ, ಆದುದರಿಂದ ಇದರ ಹೆಸರನ್ನು ಅರೆಭಾಷೆ ಎಂದು ಬರೆದರೆ ಅಥವಾ ಕರೆದರೆ ಅದು ಅರಿಸಮಾನವಾಗುತ್ತದೆ. ಆದುದರಿಂದ 'ಅರೆಬಾಸೆ' ಎಂದು ಕರೆಯುವುದೇ ಸೂಕ್ತ.

೫. ಹಾಗೆಂದು ಇವರು ಬಲಹೀನೆರೆನಲ್ಲ. ಮೊದಲ ಸ್ವಾತಂತ್ರ್ಯ ಹೋರಾಟ ನಡೆಯುವ ಇಪ್ಪತ್ತು, ಮೂವತ್ತು ವರ್ಷ ಹಿಂದೆಯೇ ಸುಳ್ಯ ಪರಿಸರದ ಗೌಡ ಮುಂದಾಳುಗಳು ಇತರ ಮುಖ್ಯ ವ್ಯಕ್ತಿಗಳನ್ನು ಸೇರಿಸಿಕೊಂಡು ಬ್ರಿಟಿಷರ ವಿರುದ್ಧ ದಂಗೆಯೆದ್ದು, ಬ್ರಿಟೀಷರ ವಶವಿದ್ದ ಮಂಗಳೂರನ್ನು ವಶಪಡಿಸಿಕೊಂಡು ಒಂದು ವಾರ ಕಾಲ ಈ ಪ್ರದೇಶವನ್ನು ಆಳಿದರು. (ವಿವರಗಳಿಗೆ ನೋಡಿ: ಎನ್.ಎಸ್.ದೇವಿಪ್ರಸಾದ್,2013;ಗೌಡರ **ಏಳುಬೀಳು–ಚಾರಿತ್ರಿಕ ಅವಲೋಕನ**. (ಪು.65 ಪೂರ್ವೋಕ್ತ ಗ್ರಂಥ)

೬. ಇವುಗಳ ಉಚ್ಚರಣೆಯ ವಿವರ ಹೀಗಿದೆ : ***i*** ಉನ್ನತ, ಮಧ್ಯ, ವಿವೃತ ಸ್ವರ ə ಮಧ್ಯ ಮಧ್ಯ ವಿವೃತ ಸ್ವರ; ɛ ಪೂರ್ವ ನಿಮ್ನ ವಿವೃತ ಸ್ವರ 2 ಪಶ್ಚ, ಮಧ್ಯ ವಿವೃತ ಸ್ವರ.

೭. ಇಲ್ಲಿ ಅಕಾರಕ್ಕಿಂತ ಭಿನ್ನವಾದ ಅಂದರೆ ನಿಮ್ನ ಮಧ್ಯದ ಬದಲು ಮಧ್ಯ, ಮಧ್ಯ ಸ್ವರದ ಉಚ್ಚಾರಣೆಯನ್ನು ಸೂಚಿಸಲು ə ಸಂಜ್ಞೆಯನ್ನು ಬಳಸಿದೆ.

೮. ಆಧುನಿಕ ವಿದ್ಯಾವಂತರಾದ ಕೆಲವು ವ್ಯಕ್ತಿಗಳು ಸ್ತ್ರೀಲಿಂಗವನ್ನು ನಪುಂಸಕದೊಡನೆ ಸೇರಿಸುವುದು ಸರಿಯಲ್ಲವೆಂಬ ಭಾವನೆಯಿಂದ ಶಿಷ್ಟ ಕನ್ನಡದಂತೆ ಅವಳು, ಇವಳು ಎಂದು ಪ್ರಯೋಗಿಸುವುದು ಸಾಮಾನ್ಯವಾಗಿ ಕೇಳಿಬರುತ್ತದೆ. ತಾವು ಸುಧಾರಕರು ಎಂದು ಅವು ಬೀಗಿದರೂ, ವಾಕ್ಯದ ಅಖ್ಯಾತ ರೂಪದಲ್ಲಿ ನಪುಂಸಕ ರೂಪವೇ ಬರುವುದನ್ನು ತಪ್ಪಿಸಲು ಸಾಧ್ಯವಿಲ್ಲ. ಅವುಳು ಹೇಳ್ತ್ = ಅವಳು ಹೇಳಿತು ಎಂದೇ ಹೇಳಬೇಕಾದ ಕಡ್ಡಾಯಕ್ಕೆ ಒಳಗಾಗಬೇಕಾಗುತ್ತದೆ.

೯. ವರ್ತಮಾನ ಕ್ರಿಯಾಪದದಲ್ಲಿ ನಾನು ಹೋಗುತ್ತೇನೆ, ನಾನು ಬರುತ್ತೇನೆ ಎಂಬ ದೀರ್ಘ ಪದಗಳನ್ನು ಅರೆಬಾಸೆಯಲ್ಲಿ ಸಂಕುಚಿಗೊಳಿಸಿ, 'ನಾ ಹೋನೆ; ನಾ ಬನ್ನೆ' ಎಂದು ಹೇಳುತ್ತಾರೆ. ಶಿಷ್ಟ ಪದಗಳನ್ನು ಕಂಪ್ರೆಸ್ (compress) ಮಾಡುವುದು ಉಪಭಾಷೆಗಳಲ್ಲಿ (dialets) ಕಂಡುಬರುವ ಸಾಮಾನ್ಯಗುಣ. ಈ ಕಾರಣದಿಂದ ಇವುಗಳಲ್ಲಿ ಸಂಯುಕ್ತ ವರ್ಣಗಳು ಅಧಿಕ ಸಂಖ್ಯೆಯುಲ್ಲಿರುತ್ತವೆ. ಕನ್ನಡದ ಒಂದು ಪ್ರಭೇದವಾದ ನೀಲಗಿರಿಯ ಬಡಗರಮಾತಿನಲ್ಲೂ 'ನಾ ಹೋನೆ,' 'ನಾ ಬನ್ನೆ' ಎಂದು ಹೇಳುತ್ತಾರೆ. ಬಡಗರ ಹೆಸರಲ್ಲಿ ಗೌಡೆಂಬ ಜಾತಿ ವಾಚಕವೂ ಸೇರುತ್ತದೆ.

# ಏನೇಳ್ರೆ ಸಣಪಾ?

ಯು.ಸು.ಗೌ. ಗುತ್ತಿಗಾರು

ಏನ್ ಸಣಪಾ, ಹೇಂಗೊಳರಿ? ಸುಮಾರ್ ದಿನ ಆತ್ ನಿಮ್ಮ ಮಾತಾಡ್ಸದೆ. ಈ ಮೊದುವೆಗಳಂದಾಗಿ ಕೈಲಿ ಹಿಡ್ದ ಕೆಲ್ಸ ಇಲ್ಲೆ. ಪುರುಸೊತ್ತ್ ಇಲ್ಲೆಂತೇಳಿ ಹೋಗದೆ ಇರ್ಕ ಆದೇನಾ ? ಇರ್ದು ಮನೆಲಿ ಒಬ್ಬ ಇಬ್ಬರ್. ದಿನಾ ನಾಲ್ಕೈದ್ ಮೊದುವೆಗ– ಎಲ್ಲವೂ ಬೇಕಾದವರ್ದ್. ಅಂತೂ ಸಣಪ್ಪಾ, ಮೊದುವೆಗೆ ಹೋದುಂತೇಳ್ರೆ ಮೋರೆ ತೋರ್ಸಿ. ಫೊಟೋ ತೆಗ್ಸಿ, ಬಾಕೆಂತ ಆಗುಟು. ಯಾಕೆಂತೇಳ್ರೆ ಈಗ ಮೊದುವೆಗಳ್ಳಿ 'ಪಚಾರಕ್ಕೆ' ದುಡ್ಡು ಕಟ್ಟಿಕೆ ಕೂಡಾ ಇಲ್ಲೆ! ಹೀಂಗೆ ಗಡಿಬಿಡಿಲಿ ಮೊದುವೆಗೆ ಹೋಗಿ ನಮ್ಮ ಐತಪ್ಪಣ್ಣ 'ಮೂಸೆ' ಆದ್ ಗೊತ್ತುಟಾ? ಹೇಳ್ನೆ ಕೇಳಿ....

ಅಂದ್ ಸುಳ್ಯಲಿ ಮೂರು ಮೊದುವೆ. ಅದ್ ಮುಗ್ಸಿ ಐತಪ್ಪಣ್ಣಂಗೆ ಪುತ್ತೂರ್ನ ಮೊದುವೆಗೆ ಹೋಕು. ಏಕೆಂತೇಳ್ರೆ ಆ ಮೊದುವೆ ಅವನ ಹೆಣ್ಣ್‌ನ ತೌರು ಮನೆ ಕಡೆ ಸಂಬಂದದ್. ಅವನ ಹೆಣ್ಣ್ ತೌರು ಮನೆ ಕಡೆ ಬೇರೊಂದು ಮೊದುವೆಂತೇಳಿ ಎರ್ಡ್ ದಿನ ಮುಂದೆ ಹೋಗಿ ಕುದ್ದುಟು. ಮಕ್ಕ ಇಬ್ರೊರು ಕೋಲೇಜಿಗೆ ಹೋಗೊವು. ಒಂದು ವೇಳೆ ಪುತ್ತೂರು ಮೊದುವೆಗೆ ಹೋತಿಲ್ಲೆಂತಾದ್ರೆ ಹೆಣ್ಣ್‌ನ 'ಪಿರಿಪಿರಿ' ಯಾರ್ ಕೇಳ್ದುಂತೇಳಿ, ಸುಳ್ಯ ಮೊದುವೆಗಳ ಬೇಗ ಮುಗ್ಸಿ ಹನ್ನೆರಡ್‌ವರೆ ಗಂಟೆಗೆ, ಪುತ್ತೂರಿಗೆ ಹೋಗುವ ಬಸ್ಸಿಗೆ ಐತಪ್ಪಣ್ಣ ಹತ್ತಿತ್. ಬಸ್ ಇಳಿಕಾಕನ ಒಂದುವರೆ ಗಂಟೆ. ಗ್ರಾಚಾರಕ್ಕೆ ಮೊದುವೆ ಯಾವ ಹಾಲ್‌ಲಿಂತ ಅಣ್ಣಂಗೆ ಮರ್ತೇ ಹೋಗುಟು! ಅಂತೂ ಅಂದಾಜಿಗೆ ಯಾವುದೋ ಹಾಲಿಗೆ ರಿಕ್ಷಾ ಮಾಡಿ ಹೋತ್. ಇವಂಗೆ ಮೊಬೈಲ್ ಹಿಡ್ದ್ ಗೊತ್ತಿಲೆ. ಹಾಂಗೆ ಯಾರೊಟ್ಟಿಗೆ ಕೇಳ್ದು?!

ಹಾಲ್‌ಲಿ ಜನ ತುಂಬಿ ಹೋಗೊಳೊ. ಒಂದು ಕಡೆ 'ಸೇಸೆ' ಹಾಕಿಕೆ ಬಾರಿ ದೊಡ್ಡ ಸಾಲ್ ನಿತ್ತುಟು, ದೇವರ ದರ್ಶನಕ್ಕೆ ನಿಂತಾಂಗೆ. ನೋಡ್ರೆ ಯಾರ ಗುರ್ತು ಪರ್ಚರಿ ಇಲ್ಲೆ; ಅಣ್ಣಂಗೆ ಹೊಟ್ಟೆ ಹಸ್ತ್ ನಡೆಕ ಆದುಲೆ. ಏನೇ ಆಗ್ಲಿ, ಸುರುಗೆ ಎರ್ಡ್ ಉಂಡ್‌ಕಂದು ಒಳ್ಳೆದ್‌ಂತೇಳಿ ಊಟದ 'ಕ್ಯೂ'ಗೆ ಹೋತ್. ಊಟ ಮಾತ್ರ ಭಾರೀ ಲ್ಯಾಕಿತ್ತ್. ಹೇಂಗೊ ಜನರ ನುಗ್ಗಾಟಲಿ 'ಉರ್ಡಪತ್ತ' ಮಾಡಿ ಬೆಗರ್ ಸುರ್ಸಿಕಂಡ್ ಉಂಡಾತ್.

ಹಾಂಗೆ ಸೇಸೆ ಹಾಕಿಕೆ ಸಾಲ್‌ಲಿ ಹೋಗಿ ನಿಂತಾತ್. ಎಷ್ಟ್ ನಿಂತರೂ ಸಾಲ್ ಮುಗಿದುಲೆ. ಹೆಚ್ಚಿ ಕಮ್ಮಿ ಒಂದು ಗಂಟೆ ಕಳ್ದಾಕನ ದಾರೆ ಮಂಟಪಕೆ ಹಕ್ಕಲೆ ಬಾತ್! ಅರೆ! ಎಲ್ಲರ ಕೈಲಿ ಕವರ್ ಕಂಡದಲೆ! ಇದ್ ಕವರಿಲ್ಲದ ಮೊದುವೆಂತ ಐತಪ್ಪಣ್ಣ ಗ್ರೈಸಿತ್ತ್. ನೋಡಿಕೆ ಹೋದರೆ ಹೈದನ ಕಡೆವಾಗಲಿ ಗೂಡೆನ ಕಡೆವಾಗಲಿ ಯಾರ ಗುರ್ತವೂ ಗೊತ್ತಾದುಲ್ಲೆ. ಎಲ್ಲವೂ ತುಳು ಮಾತಾಡ್ತ ಒಳೊ. ಈ ಅಣ್ಣಂಗೆ ಹೈದನ ಆಗಲೀ ಗೂಡೆನ ಆಗಲಿ ಹೆಸರೂನು ಗೊತ್ತಿಲೆ! ನೋಡಿಕೆ ಹೋದ್ರೆ ಇದ್ ಯಾರ್ದೋ ಬೇರೆ ಜಾತಿಯವರ ಮೊದುವೆ! "ಹಾಲ್ ತಪ್ಪಿ ಇಲ್ಲಿಗೆ ಬಂದ್ ಕೆಲ್ಸ ಕೆಟ್ಟತಲೆ" ಅಂತ ಮನಸ್ಸ್‌ಲೇ ಪರ್ಚಿಕಂತ್. ಇತ್ತ ದಾರೆ ಮಂಟಪದ ಹಕ್ಕಲೆ–ಏನೊ ಪುಣ್ಯಕ್ಕೆ ಜೋಬಿಲಿ ಒಂದು ಕವರ್ ಇತ್ತ್. ಐವತ್ತು ರೂಪ್ಯಾಯಾದ್ರು ಹಾಕುದಂತ ಜೋಬಿಗೆ ಕೈ ಹಾಕಿರೆ ಚಿಲ್ರೆ ಇಲ್ಲೆ. ಎಲ್ಲ ನೂರರ ನೋಟುಗ! "ಸುಟ್ಟೇ ಹೋಗ್ಲಿಂ"ತೇಳಿ ಕವರಿಗೆ ನೂರು ರೂಪಾಯಿ ಹಾಕಿ ಹೈದನ ಕೈಗೆ ಕೊಟ್ಟು ತಿರ್ಗಿ ಕೂಡಾ ನೋಡದೆ ಇಳ್ದ್ ಬಾತ್‌ಗಡ.

ಹೆಣ್ಣ್ ತವರು ಮನೆಂದ ಬಂದ ಮೇಲೆ ಐತ್ತಪ್ಪಣ್ಣನೊಟ್ಟಿಗೆ ಒಮ್ಮೆ ಕೇಳ್ತ್‌ಗಡ– "ಮೊದುವೆಗೆ ಹೋಗಿದ್ದರ್ಯಾ" ಅಂತ. ಅವನ ಪುಣ್ಯಕ್ಕೆ ಅವ್ವು "ಗೂಡೆಗೆ ಎಷ್ಟ್ ಚಿನ್ನ ಹಾಕಿದ್ದೊ". "ಹೈದನ ಬಣ್ಣ ಹೇಂಗೆ? ಶೀಲಕ್ಕ ಬಂದಿತ್ತಾ? ಅಕ್ಕಮ್ಮ ನನ್ನ ಕೇಳ್ತಾ" ಅಂತೆಲ್ಲ ರಾಗ ಎಳ್ತಿಲೆ. 'ಮೊದುವೆಗೆ ಹೋಗಿದ್ದೆ'ಂತ ಹೇಳಿ ಐತಪ್ಪು ಬೇಗ ಜಾಗ ಖಾಲಿ ಮಾಡ್ತ್, ಏಕಂತ ಇನ್ನು ಕೂಡಾ ಅವ್ಳಿಗೆ ಗೊತ್ತಿಲ್ಲೆ !

ನೋಡಿ ಸಣಪಾ, ನಿಮ್ಮ ಕಾಲಲಿ ಮೊದುವೆಗೆ ಹೋದೇ ಸಡ್ಗರ. ಪ್ರೀತಿ ಬಾಂಧವ್ಯಲಿ ವೀಳ್ಯ ಕೊಟ್ಟು ಕರೆತಿದ್ದೊ, ಮಾತಾಡ್ತಿದ್ದೊ. ಈಗ ಮೊದುವೆಗ ಎಲ್ಲ ಗಡಿ ಬಿಡಿಲಿ ಆಗ್ತಾ ಒಳೊ. ಯಾರ್ ಬಂದರೇನ್ ಹೋದರೇನ್. ಒಟ್ಟು ಜನ ತುಂಬೊಕು! ಊಟಲಿ ಹತ್ತಿಪ್ಪತ್ ಬಗೆಗ. ಜನಾದ್ರೂ ಗಡಿಬಿಡಿಲಿ ಹೇಂಗೆ ಉಣಕೂ? ಉಂಬಕಾದ್ರೂ ಪುರುಸೊತ್ ಉಟ್ಟಾ? ಈಗೀಗ ಮೊದುವೆಗ ಪ್ರದರ್ಶನ ಮಳಿಗೆಗ ಆಗ್ತಾ ಇದ್ದಾಂಗೆ ಕಂಡದೆ. .. .. .. ..

ಏನೇಳ್ತೆ ಸಣಪಾ.. .. .. .?.

# ಕಣ್ಣೀರ ಬದ್‌ಕ್

ಬೈಮನ ಬೋಜಮ್ಮ ಪೊನ್ನಪ್ಪ

ಅದೊಂದು ಸಿರಿವಂತ ಕುಟುಂಬ. ತುಂಬಾ ಸಾದಾರಣ ಹಳ್ಳಿ. ಆ ಮನೇಲಿ ಚಾಂಪನೆ ಹಿರಿಯ, ಚಾಮೆವ್ವ, ಅಪ್ಪ, ಅವ್ವ, ಬೋಜಪ್ಪ, ಬೋಜವ್ವ, ಸಣ್ಣಪ್ಪ, ಸಣ್ಣವ್ವ, ಕುಂಞಕ್ಕ, ಕುಂಞವ್ವ, ಆಳ್‌ಕಾಳ್ ಸೇರಿ ಸುಮಾರು 15 ರಿಂದ 20 ಜನ ಇದ್ದಂತ ಮನೆ, ಬೇಕಾದಷ್ಟ್ ಬೂಮಿ, ಸಮೃದ್ದವಾಗಿ ಬೆಳೆಬೆಳೆಯೊಕೆ ಹಿಂದೆ ಮುಂದೆ ನೋಡದ ಮಕ್ಕ ಹಿಂಗಾಗಿ ಆ ಮನೇಲಿ ಉಂಬಕೆ ,ತಿಂಬಕೆ ಯಾವುದೇ ಕೊರತೆ ಇತ್ಲೆ. ಸದಾ ಬಂದುಗ, ಊರವುತ ತುಂಬಿ ತುಳ್‌ಕ್‌ತಿತ್ತ್ ಕಷ್ಟಾತ ಹೇಳ್ದವ್‌ಕೆ ಸದಾ ಸಹಾಯಹಸ್ತ ನೀಡ್‌ತ್ತಿತ್ತ್ ಹಿರಿಮಂಜ ಇದ್ದರೆ ಚಾಂಪನಮನೆ ಇದ್ದಂಗೆ ಇರೊಕುತ ಎಲ್ಲವು ಹೇಳ್‌ತ್ತಿದ್ದೊ. ಅದಿಕಾರಿಗ ಬಂದರೆ ಇವರ ಮನೆಲಿ ಊಟೋಪಚಾರ ಎಲ್ಲ. ಹಿರಿಮಂಜನ ಮದ್ವೆ ಆಗಿ 8 ಮಕ್ಕ ಅದೊ, ಕಿರಿಯವಂಗೆ 9 ಮಕ್ಕ ಆದೊ, ಮದ್ಯದವ ಹೆಣ್ಣ್ ನೋಡಿ ಬಂದ ಮ್ಯಾಲೆ ಪೆಟ್ಟ್ ಸಿಕ್ಕಿ ಸತ್ತ್ ಹೋತ್, ಸಂಸಾರ ದೊಡ್ಡದಾತ್ 20–30 ಜನ ಆದೊ ಬೇಕಾದಷ್ಟ್ ದನ ಕರ್‌ಗ ಇದ್ದೊ, ಹಾಲ್ ಮೊಸ್‌ರ್ ಮಜ್ಜಿಗೆ, ತುಪ್ಪ ಯಾಗೋಳೂ ಮನೆಲಿರ್‌ತ್ತ್, ದುಡ್ಡ್ ಬೆಸಗೆಲಿ ಇರ್ತಿತ್ತ್, ಕಷ್ಟತೇಳ್‌ಕಾಕನ ಬಿಂದಿಗೆಲಿ ಅಕ್ಕಿ ತುಂಬ್‌ಸಿ ಕೊಡ್ತಿತ್ತ್, ಹಿರಿಸೊಸೆ ಇಷ್ಟೆಲ್ಲಾ ಯಾಕೆತ ಕೇಳ್ತ್, ಮುಂದೆ ಇದೇ ಕುಟುಂಬದ ಹಿರಿಯ ಮಂಜನ ಮದುವೆ ಆಗಿ 3 ವರ್ಷ ಮಕ್ಕ ಆತ್ಲೆ ಆದ್ರೂ ತಲೆ ಕೆಡ್ಸಿಕಣದೆ ಅಕ್ಕನ ಮಗಳ್ನ ತಂದ್ ಮನೇಲಿ ಇಟ್ಟ್‌ಕೊಂಡೋ ಕೂಸ್‌ನ ಕಾಲ್ಗುಣನೋ ಏನೋ

ಅದೇ ವರ್ಷಲಿ ಮಂಜಂಗೆ ಹೆಣ್ಣ್ ಕೂಸ್ ಆತ್, ಕುಟುಂಬಲಿ ಮೊದಲ್ನೆ ಕೂಸ್‌ತ್ತೇಳಿ ಖುಷಿಲಿ ಊರಿಗೆಲ್ಲಾ ಊಟ ಕೊಟ್ಟೊ ಯಾಗೋಳು ಕೂಸ್‌ನ ಎತ್ತಿಕಂಡ್ ಇರ್‍ತಿದ್ದೊ ಮೇಲೆ ಇಟ್ರೆ ಕಾಗೆ ಕಚ್ಚಿಕಂಡ್ ಹೋದೆ, ಕೆಳಗೆ ಬಿಟ್ರೆ ಪಿಜಿನಿ ಕಚ್ಚಿಕಂಡ್ ಹೋದೆತಾ ಹೇಳ್ಕಂಡ್ ಬಾಳ ಮುಚ್ಚಟೆಯಾಗಿ ಬೆಳ್ಸಿದೊ ಕೂಸ್‌ನ, ಮತ್ತೆ ಕುಟುಂಬಲಿ ಮಕ್ಕಳ ಸಂಖ್ಯೆ ಜಾಸ್ತಿ ಆಗಿ ಒಂದ್ ಸ್ಕೂಲೇ ಆತ್ ಮನೆ, ಮಾಸ್ಟರ್ ಆತ್ ಹಿರಿ ಮಂಜನ, ಮನೆಗೆ ಚಾಂಪ ಒಂದ್ ಕಂಡಿಷನ್ ಹಾಕಿತ್. ಹೆಣ್ಣ್ ಮಕ್ಕ 10ನೇ ಕ್ಲಾಸ್‌ಂದ ಮೇಲೆ ಓದಿಕ್ಕಾಗದ್ ಮದ್ವೆ ಮಾಡಿಕೊಡಕೂತ.

ಆ ಮನೆ ಮೊದಲ್ನೆ ಮಗಳ ಮದ್ವೆ, ಎಂಥಾ ಮದ್ವೆ ಮನೆಲಿ ಸಾಕಿದ ಹಂದಿ ಕೋಳಿಗಳ ಕೊಂದ್ ಪುಷ್ಕಳ ಬೋಜನ ಊರ್‌ನವ್ ಮಕ್ಕ ಮರಿಗ ಬಂದ್‌ಗ ಎಲ್ಲಾ ಸೇರ್‍ದೋ, ಊರ್‍ನವು ಸೆಡೆ, ಮಡ್ಕೆ, ಕುಕ್ಕೆ ಒಪ್ಸಿದೊ, ಮುಂದೆ ಕೆಲ್ಸ ನೋಡಿಕಣಿಕೆ 3 ದಿನದ ಮದ್ವೆ ಹೈದ ಸೇನೆಯಲ್ಲಿತ್ತ್. ಅವ್ರ ಮನೆವು ಕೂಡ ಬಾಳ ಲಾಯ್ಕ ಇದ್ದೊ ಹಿಂಗಾಗಿ ಸಂಬಂದ ಬೆಳ್ಸಿ ಎಲ್ಲವೂ ಸೇರ್‍ಕಂಡ್ ಮಗಳ್ನ ದೂರದ ಊರಿಗೆ ಕೊಟ್ಟೊ. ಹಂಗೆ ಕೂಸಿಗೆ ಯಾವ್ದೆ ಕೆಲ್ಸ ಕಾರ್ಯ ಗೊತ್ಲೆ, ಅತ್ತೆ ನಿದಾನಕ್ಕೆ ಒಂದೊಂದಾಗಿ ಕೆಲ್ಸ ಕಲ್ಸಿತ್, ಅತ್ತೆ ಮನೆವು ಬಾಳ ಒಳ್ಳೆ ಜನ, ಅಳಿಯ ಹೆಣ್ಣ್ ಮನೇಲಿರ್‍ದು ಬ್ಯಾಡ ಟೀಚರ್ ಟ್ರೈನಿಂಗ್ ಮಾಡಲಿತ್ತೇಳಿ ವಿರಾಜಪೇಟೆಲಿ ಟ್ರೈನಿಂಗ್‌ಗೆ ಸೇರ್‍ಸಿತ್ತ್, ಎರಡ್ ವರ್ಷ ಟ್ರೈನಿಂಗ್ ಮುಗ್ತ್, ಇತ್ತ ಮೊದ್ಲ್ ಹೆಣ್ಣ್ ಕೂಸ್ ಹುಟ್ಟಿತ್ ಒಂದರ ಹಿಂದೆ ಒಂದ್ ಎರಡ್ ಹೆಣ್ಣ್ ಮಕ್ಕ ಹುಟ್ಟಿದೊ.

ಮೂರನೇ ಕೂಸ್ ಹುಟ್ಟಿ ತಿಂಗ ಆಕನ ಎದ್‌ರಾತ್ ದುರಂತ ಅವ್ವ ಬೆಳಿಗ್ಗೆ ಕಯ್ಯಾಲೆ ಹಾಲ್ ಗುಡ್ಸಿಕಾಕನ ಮಂಜುನಾಥ ಸ್ವಾಮಿ, ಪೋಟೋ ಇದ್ದಕಿದ್ದಂಗೆ ಬಿದ್ದ್ ಒಡ್ದ್ ಹೋತ್, ಏನೋ ಅಪಶಕುನ ಉಟ್ತ್‌ತ್ತೇಳಿ ಚಿಂತೆಗೀಡಾದೋ ಗುರುಕಾರಣಂಗೆ ಹರ್‍ಕೆ ಕಟ್ಟಿಕಂಡವೆ. ಸುಮಾರ್ ನಾಲ್ಕ್ ಗಂಟೆ ಆಕಾಕನ ಟೆಲಿಗ್ರಾಂ ಬಂದದೆ ಸೇನೆಲಿದ್ದ ಮಂಜ ಸತ್ತ್ ಹೋತ್‌ತ, ಬರಸಿಡ್ಲಂಗೆ ಬಂದ ಸುದ್ದಿನ ತೌರಿಗೆ ತಿಳ್ಸಿವೆ, ತೌರವ್ಕೆ ಆಕಾಶನೆ ಮೇಲೆ ಬಿದ್ದಂಗೆ ಆದೆ, ದಿಗ್ಭ್ರಾಂತಿಂದ ಊರವ್ಕೆ ತಿಳ್ಸಿವೆ, ಮನೆವ್ ಊರವು ನೆಂಟ್ರಿಷ್ಟರ್ ಎಲ್ಲ ಓಡೋಡಿ ಮಗಳ ಹತ್ರ ಹೋದವೆ, ಕೋಡಿಯಾಗಿ ಕಣ್ಣೀರ್ ಹರ್‌ದದೆ ಮೂರ್ ಮಕ್ಕಳ ಹಕ್ಕಲೆ ಮಲ್‌ಗ್ಸಿಕಂಡ್ ಸ್ಮೃತಿ ತಪ್ಪಿ ಬಿದ್ದ ಮಗಳ್ನ ನೋಡಿ ಉಸುರೇ ನಿಂತ ಹಂಗಾದೆ, ಎರ್‍ಡ್ ಕುಟುಂಬದವು ಕುದ್ದು ಚರ್ಚೆ ಮಾಡಿವೆ, ಮುಂದೇನ್‌ತಾ ಅವಳ ತಮ್ಮನ ದೊಡ್ಡಪ್ಪನ ಮಂಜನು ಕಲ್ಕತ್ತಕ್ಕೆ ಹೋದವೆ ಹೆಣ ತಾಕೇತ, ಆದ್ರೆ ಅಲ್ಲಿ ಹೆಣ ಕೊಡದೆ ಬರೀ ಬೂದಿ ಕಳ್ಸಿವೆ ಅದನ್ನೆ ಇಟ್ಕಂಡ್ ಸಂಸಾರ ಮಾಡಿವೆ ಹೆಣ್ಣ್‌ಗೆ ಯಾಗೋಳು ತೌರ್ ಗಟ್ಟಿಯಾಗಿರೊಕು ತೌರ್ ಗಟ್ಟಿ ಇದ್ದರೆ ದಿಕ್ಕ್ ತಪ್ಪಿದ ಮಗಳ ಬದ್‌ಕ್‌ನ ಸಮಾಜ ಮುಖ್ಯ ವಾಹಿನಿಗೆ ತಾಕೆ ಹೆಗ್‌ಲ್‌ಗೆ ಹೆಗ್‌ಲ್ ಕೊಟ್ಟ್ ನಿತ್ತವೆ. ತೌರುಮಗಳ್ನ ಮೂರ್ ಮಕ್ಕಳ್ನ ಬಾಚಿ ತಬ್ಬಿಕಂಡೊ ಹೆದ್ರ್‌ಬ್ಯಾಡ ನಾವ್ ಒಳೊ. ನಮ್ಮ ಗುಬ್ಬಚ್ಚಿ ಗೂಡ್‌ಲಿ ನಿಮ್ಮನ ಬೆಚ್ಚಗೆ ಇಟ್ಟ್‌ಕಂಡವೆ, ಯಾವ್ದೆ ಬ್ಯಾನೆ ಆಗದಂಗೆ ನೋಡಿಕಂಡವೆಂತ ಸಮಾದಾನ ಮಾಡ್ದೊ. ಗಂಡನ ಮನೆವು ಬಾಳ ದು:ಖ ಪಟ್ಟವೆ ಈ ಸಣ್ಣ ವಯಸ್ಸಿಗೆ ಹಿಂಗಾತ್,

ಕೊನೆವರೆಗೂ ನಾವ್ ನೋಡಿಕೊಂಡವೆಂತ ಹೇಳ್ವೆ ಆಗ ಅವ್ಳಿಗೆ ಬರೀ ಇಪ್ಪತ್ತೆರಡ್ ವರ್ಷ ಎಲ್ಲಾ ಸೌಭಾಗ್ಯ ಕಳ್ಕಂಡ್ ರೆಕ್ಕೆ ಮುರ್ದ ಒಂಟಿ ಹಕ್ಕಿ ಆದೆ, ಹೆಕ್ಕಿ ತಿನ್ನೊ ಕೋಳಿ ಕಾಲ್ ಮುರ್ದಾಂಗಾತ್.

ಹೆಣ್ಣ್ ಮಕ್ಕಳ್ಗೆ ವಿದ್ಯೆ ಕೊಡ್ನೊಕುಂತಾ ಹೇಳ್ದು ಎಷ್ಟ್ ನಿಜಾತ ಆಗ ಗೊತ್ತಾತ್, ಹಡ್ದ ತೌರವರ ಬಲ ಎಷ್ಟ್ ಇದ್ರೂ ಮುಂದೆ ನಾನ್ ಮಕ್ಕಳ ಬವಿಷ್ಯನ ಹೆಂಗೆ ರೂಪಿಸುದು ತೌರಿಗೆ ಬಾರ ಆದೂ ಬ್ಯಾಡ, ದಾರಿ ಕಾಣದೆ ಬರೀ ಕಗ್ಗಂಟಾದೆ ಬದ್ಕೊ ಶಕ್ತಿ, ಇಚ್ಚಾ ಶಕ್ತಿ, ಕುಂದಿ ಹೋದೆ, ಉಸಿರಿಗೆ ಉಸಿರಾಗಿದ್ದನೆತ ಹೇಳ್ದವು ಮದ್ಯಲಿ ಕೈಬುಟ್ಟ್ ಉಸ್‌ರ್ ನಿಲ್ಸಿ ಹೋದೆ ಈ ಬದ್‌ಕ್ ಬ್ಯಾಡಾತ ನಿರ್ಧಾರ ಮಾಡ್ದೆ, ಅದೊಂದ್ ಅಮವಾಸ್ಯೆ ರಾತ್ರೆ ಬರೀ ಕತ್ತಲು, ಯಾರ್ ನೋಡಿಕಿಲ್ಲೆತ್ತೇಳಿ ಬಾವಿಗೆ ಬೀಳಿಕೆ ಹೋದೆ, ಸದಾ ಕಣ್ಣ್‌ಲಿ ಕಣ್ಣಿಟ್ಟ್ ಕಾಯ್ತಿದ್ದ ಕೊನೆ ಮೈದುನ ಬೆನ್ನ ಹಿಂದೆ ಹೋದೆ, ಇನ್ನೇನ್ ಬಾವಿಗೆ ಬೀಳೋಕುತಾ ಹೇಳ್‌ಕನ ಕಾಲ್ ಹಿಡ್ಕಂಡದೆ, ಪಸ್ಟ್ ಮಕ್ಕಳ ಮತ್ತೆ ನನ್ನ ಬಾಮಿಗೆ ಹಾಕಿ ಮತ್ತೆ ನೀವ್ ಬೀಳಿತ್ತೇಳ್ದೆ ಅಯ್ಯೋ! ವಿದಿಯೇ ಸಾಯೋಕು ಹಕ್ಕಿಲ್ಲದಂಗೆ ಮಾಡಿಬುಟ್ಟ ನನ್ನ ಬದ್‌ಕ್ ಮೂರಾಬಟ್ಟೆ ಆಗ್ಹೋತ್ ಇನ್ನೇನು ಮಾಡ್ಲಪ್ಪ ಶಿವನೇತಾ ಹೇಳಿಕಂಡ್ ಮೈದುನನ ಒಟ್ಟಿಗೆ ವಾಪಸ್ಸ್ ಬಂದದೆ, ಅಂದೇ ಒಂದ್ ತೀರ್ಮಾನ ತಕ್ಕಂಡದೆ ಮುಂದೆ ಎಂತಾ ಕಷ್ಟ ಬಂದರೂ ಮಕ್ಕಳ್ನ ತಬ್ಬುಲಿ ಮಾಡ್ದುಲೆತಾ ನಾಲ್ಕ್ ಜನ ಮೆಚ್ಚುವಂಗೆ ಸಾಕಿನೇತ ಮನ್ಸ್ ಹೆಬ್ಬಂಡೆ ಆತ್.

ಪಡ್ದ ವಿದ್ಯೆ ಕೈಯಲ್ಲುಟ್ಟು ಮುಂದೆ ಮಕ್ಕಳ ಬವಿಷ್ಯ ಉಟ್ಟು, ಮಡ್ಲಲ್ಲಿರ್ವ ಮೂರ್ ಮಕ್ಕಳ ಇಟ್ಟ್ ಕಂಡ್ ದಿಕ್ಕ್ ತೋಚದೆ ಪರಿಸ್ಥಿತಿ ಎಲ್ಲಿ ನೋಡ್ರು ಕತ್ತಲೆ, ಎಲ್ಲಿಗೆ ಹೋದು, ಎಷ್ಟ್ ದಿನಾಂತ ಹಿಂಗೆ ಇರ್ದು, ಕೊಟ್ಟ ಹೆಣ್ಣ್ ಕುಲಕ್ಕೆ ಹೊರಗೆ ಎಷ್ಟ್ ಸುಕಲಿ ಬೆಳ್ದೊ ಒಳ್ಳೆಯ ಗಂಡ, ಗಂಡನ ಮನೆಯವು ಸಿಕ್ಕಿತ್‌ತ್ತೇಳಿ ಸಂತೋಸ ಪಟ್ಟಿದೆ. ಅತ್ತ ದರಿ ಇತ್ತ ಪುಲಿ ಏನ್ ಮಾಡ್ಲಿ ಬದ್‌ಕ್ ಕೊಟ್ಟವನೆ ಬದ್‌ಕ್ ಕಿತ್ತ್ ಕಂಡ್ ಬಡ್ತಾ, ತಲೆ ಮೇಲೆ ಕೈಹೊತ್ತ್ ಕುದ್ದದ್ದೆ ಅವಳ ತಮ್ಮನೂ ವಿದ್ಯಾವಂತನೇ, ಟೀಚರ್ ಕೆಲ್ಸಕ್ಕೆ ಅರ್ಜಿ ಹಾಕಿವೆ ಮೇಲಾದಿಕಾರಿಗಳ ಬೇಟಿ ಮಾಡಿವೆ ಪರಿಸ್ಥಿತಿನ ವಿವರಿಸಿವೆ ಕಚೇರಿಂದ ಕಚೇರಿಗೆ ಅಲ್ದವೆ, ಅಂತೂ-ಇಂತೂ ಸತತ ಹೋರಾಟಂದ ಕೆಲ್ಸ ಸಿಕ್ಕಿತ್, ಆ ಕೆಲ್ಸನೇ ದೇವ್ರ್‌ತ ನಂಬಿ ತನ್ನ ತಾ ತೊಡ್‌ಗ್‌ಸಿಕೊಂಡತ್, ಒಂದೊಂದು ಮಕ್ಕಳ್ನೂ ದೇವ್ರತಾ ಪೂಜಿಸಿ ವಿದ್ಯೆ ನೀಡ್ತ್, ತನ್ನ ಮಕ್ಕಳ್ನ ಓದ್‌ಸಿತ್ ತನ್ನ ಕೈ ಹಿಡ್ದ್ ಬದ್‌ಕ್ ಕೊಟ್ಟ ತೌರಿಗೂ ಸಹಾಯ ಮಾಡ್ತ್, ಕೆಲ್ಸದ ರೀತಿನ ಅದಿಕಾರಿಗ ಗುರ್ತಿಸಿ ಉತ್ತಮ ಶಿಕ್ಷಕಿತಾ ಪ್ರಶಸ್ತಿ ಕೊಟ್ಟೊ. ತನ್ನ ಬದ್‌ಕ್ ರೂಪಿಸಿದ ತಾಯಿ ಶಾರದೆಗೆ ವಂದಿಸಿತ್.

ಮಕ್ಕಳ್ನ ಮದ್ವೆ ಮಾಡಿ ಒಳ್ಳೆಯ ಮನೆಗೆ ಸೇರ್ಸಿತ್, ನಿವೃತ್ತಿ ಆತ್, ಬಾಡಿಗೆ ಮನೇಲಿ ವಾಸ, ಮಕ್ಕ ಮನೇಗೆ ಕರ್ದವೆ, ಸ್ವಾಬಿಮಾನಿ ಹೆಣ್ಣ್ ಕೈಕಾಲ್ ಗಟ್ಟಿ ಇರ್ರಾಕನ ಯಾರ ಮನೇಗೂ ಬಾದ್‌ಲೆ, ಬಂದರೆ ನಿಮಗೆ ತೌರೇ ಇರ್ದುಲೆತ ಹೇಳಿ ಒಬ್ಬೊಂಟಿಯಾಗಿ ಬದ್‌ಕ್ ಸಾಗಿಸ್ ತುಟ್ಟು ಅದ್ಕೆ ಹೆಣ್ಣ್‌ತಾ ಯಾರ್ ಕಡೆಗಾಣಿಸ್‌ಬೇಡಿ ಶಿಕ್ಷಣವೇ ಶಕ್ತಿ

ಎಲ್ಲವುಕೂ ಸಮಾನ ಶಿಕ್ಷಣ ಕೊಡ್ಸಿ ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ ಎಂದ್ ಹೇಳ್‌ವಂಗೆ ಸಾಬೀತ್ ಪಡ್ಸಿ ಸಮಾಜಲಿ ತೊಟ್ಲ್ ತೂಗೋ ಕೈ ದೇಶನಾ ಆಳ್ದ್ ತಾ ಹೇಳಿಕೆ ಅವಕಾಶ ಮಾಡಿಕೊಡಿ ಹೆಣ್ಣ್ ಮಕ್ಕ ಒಳಗೆ ಹೊರಗೆ ಬಾಕಾಕನ ಕನ್ನಡಿ ಹಂಗೆ ಹೊಳ್ದದೆತೇಳಿ ಬಾಳ್ ಬೆಳೊಗೊ ಹಂಗೆ ಮಾಡಿ ಅವಳಿಗೂ ಬದುಕುವ ಹಕ್ಕ್ ಉಟ್ಟೂತ ತಿಳ್ಕಂಡ್ ಬನ್ನಿ

ದೀಪಂದ ದೀಪ ಹೊತ್ಸುವ ಕೆಲ್ಸನಾ ಹೆಣ್ಣ್ ಮಗಳ್ ಮಾಡ್ತ್ ತನ್ನ ಮನೇ ದೀಪ ಆರಿಹೋದರೂ ಸಾವಿರಾರ್ ದೀಪ ಹೊತ್ಸಿ ಮಕ್ಕಳ ಬಾಳಿಗೆ ಬೆಳಕಾಗಿ ತನ್ನ ಬಾಳ್‌ನ ಸಾರ್ಥಕ ಪಡಿಸಿಕಂಡ ಮಹಾಮಾತೆಗೆ ನನ್ನ ಹೃದಯಾದಾಳದ ಅಬಿನಂದನೆಗೆ ಅವರ ಬದ್‌ಕ್ ನೂರಕ್ಕೂ ಕಾಲ ಸುಖವಾಗಿರಲಿ ಗುರುಕಾರೋಣೊ ಕುಲ ದೇವ್ರ್ ವೆಂಕಟರಮಣ ಜೀವನ್ಮುಖಿ ಕಾವೇರಿ ಮಾತೆ ಅನುಗ್ರಹಿಸಲಿತ ಬೇಡಿಕಣೆ.

## ಆಳ್ ಬ್ಯಾಡ

**ಕುಲ್ಲಚನ ಕಾರ್ಯಪ್ಪ ಕುಂಬಳದಾಳು**

ಕೊಟ್ಟ್‌ಕತ್ತಿ ಬಾಣೆಲಿ
ಕೊಂಬೋಲಗ ಕೇಳಿದೆ
ಅಳ್‌ಬ್ಯಾಡ ನೀನ್ ಕುಂಞಕ್ಕ
ಡಬ್ಬ್‌ಡಕ ಬಾಣೆಲಿ
ದಿಬ್ಬಣ ಬಂದುಟ್ಟು
ಅಳ್ ಬ್ಯಾಡ ನೀನ್ ಸಂಣಕ್ಕ

ಕೂಸುಗೆ ಪೂಸಿ
ಸಗ್ಣಕಟ್ಟೆ ಕಟ್ಟಿ
ಪೊವ್ವ ಕುಪ್ಪ ಹಾಕಿ
ಹಾಲ್ ಬೋನ ಉಂಡ್
ಮಾಮನೆಗೆ ನಡಿಮಂಞ
ನಾ ಬನ್ನೆ ನಿನ್ನ ಬೆನ್ನ್
ಹಿಂದೆ, ಹಿಂದೆ.

# ಹೆಡ್ಡದೂಮನ ಕತೆ

ಎಂ.ಜಿ ಕಾವೇರಮ್ಮ

ಅಂದ್ ಹಿಂಬೊತ್ತ್ ನಾವು ಕತೆ ಕೇಳಿಕಾಗಿ ಅಜ್ಜಪ್ಪನ ಹುಡ್ಕಿದೋ ಅವು ಕಾಂಬತಿತ್ಲೆ. ಅವ್ವನೊಟ್ಟಿಗೆ ಕೇಳಿಕನ ಅವರ ಯಾರೋ ಮೊದ್ದು ಮಾಡಿಕೆ ಕರ್‍ಕೊಂಡ್ ಹೋಗೊಳೋಂತ ಹೇಳ್ದೊ. ನಮ್ಮ ಅಜ್ಜಪ್ಪ ದನಂಗಳಿಗೆ ನೂಲು ಮೊಂತ್ರಿಸಿ ಕಟ್ಟಿದ್ದೊ. ದನಂಗಳ ಕಾಯ್ಲೆಗೆ ಮೊದ್ದ್ ಕೊಡ್ತಿದ್ದೊ. ಕಣ್ಣಸ ತೆಗಿತಿದ್ದೊ, ಭಸ್ಮ ಮೊಂತ್ರಿಸಿ ಕೊಡ್ತಿದ್ದೊ. ಅವ್ಕೆ ನಾಟಿ ಮೊದ್ದ್ ಗೊತ್ತಿತ್ತ್. ಬೇರೆ ಬೇರೆ ಕಡೆಂದ ಜನಂಗ ಬಂದ್ ಅವರ ಕರ್‍ಕಂಡ್ ಹೋಗ್ತಿದ್ದೊ. ಒಮ್ಮೊಮ್ಮೆ ಹೋದರೆ ಬಾಕನ ಎರ್ಡ್ ಮೂರು ದಿನ ಕಳ್ಯತಿತ್ತ್. ಅವು ಇಲ್ಲದೆ ನಾವ್ಗೆ ಬಾಳ ಬೇಜಾರ್ ಆತ್. ಯಾಗ ಅಜ್ಜಪ್ಪ ಬಂದವೇಂತ ಕಾದ್ ಕುದ್ದೊ. ಅಂತೂ ಒಂದಿನ ನಾವೆಲ್ಲಾ ಸಾಲೆ ಬುಟ್ಟ್ ಬಾಕನ ಅಜ್ಜಪ್ಪ ಮನೆಲಿದ್ದೊ. ನಾವೆಲ್ಲ ಕುಸಿಂದ ಬೇಗ ಬೇಗ ಕೈ ಕಾಲ್ ತೊಳ್ದ್‌ದ್ ಅವ್ವ ಕೊಟ್ಟ ಹಪ್ಪಳ ಸಂಡಿಗೆ ತಿಂದ್ ಕಾಪಿ ಕುಡ್ದ್ ಕತೆಗಾಗಿ ಅಜ್ಜಪ್ಪನ ಹಕ್ಕಲೆ ಬಂದೊ. 'ಅಜ್ಜಪ್ಪ , ನೀವಿಲ್ಲದೆ ನಾವುಗೆ ಕತೆ ಹೇಳೊವೇ ಇಲ್ಲೆ. ಒಳ್ಳೆ ಕತೆ ಹೇಳಿಂತ ಅವರ ಹಕ್ಕಲೆ ಕುದ್ದೊ. ಬನ್ನಿ ಮಕ್ಕಳೇ ಹೆಡ್ಡ ದೂಮನ ಕತೆ ಹೇಳ್ನೇಂತ ಕತೆ ಸುರು ಮಾಡ್ದೊ.

ಒಂದ್ ಊರ್‍ಲಿ ಒಂದು ಅಯ್ಯೆಗೆ 5 ಜನ ಗಂಡ್ ಮಕ್ಕ ಇದ್ದೊ. ಅದರ್‍ಲಿ ಕಡೆಂವ ತುಂಬಾ ಹೆಡ್ಡ. ಅಂವನ ಹೆಡ್ಡ ದೂಮಂತ ಎಲ್ಲೋವು ಕರ್‍ಯೋತಿದ್ದೊ. ಆದರೆ ಕೆಲಸಲಿ ಮಾತ್ರಾ ತುಂಬಾ ಉಸಾರ್. ನಾಕ್ ಜನರ ಕೆಲ್ಸ ಒಬ್ಬನೇ ಮಾಡ್ತಿತ್ತ್. ಅಣ್ಣಂದರಿಗೆ ಅವನ ಕಂಡರೆ ಸಸಾರ. ಒಂದ್ ದಿನ ಅವೆಲ್ಲಾ ಕಾಡಿಗೆ ಸೌದೆ ತಾಕೇಂತ ಹೋದೊ. ಹೆಡ್ಡ ದೂಮನೂ

ಅವರೊಟ್ಟಿಗೆ ಹೋತ್. ಆಗ ಅಣ್ಣಂದರ್, ' ನೀ ನಮ್ಮೊಟ್ಟಿಗೆ ಬಾದು ಬೇಡಾಂತ ಬ್ಯೊದ್ ಕಳ್ಸಿದೊ. ಅಂವ ಅಡ್ಗಿಕಂಡ್ ಅವ್ಕೆ ಗೊತ್ತಾಗದ ಹಾಂಗೆ ಹಿಂದೆ ಹಿಂದೆ ಹೋತ್. ದಾರಿಲಿ ಒಂದು ಮರಲಿ ಅವ್ಕೆ ತುಂಬಾ ಜೇನ್ ಎರಿಗ ಕಂಡೊ. ಆಗ ಅಣ್ಣಂದರ್, 'ಅದ್ ತುಂಬಾ ಎತ್ತರಲಿ ಉಟ್ಟು ಹೆಡ್ಡದೂಮ ಇರ್ತಿದ್ದರೆ ಸರಸರನೆ ಹತ್ತಿ ತೆಗ್ದ್ ಕೊಡ್ತಿತ್ತ್‌ಂತ ಮಾತಾಡಿಕೊಂಡೊ. ಮರೆಲಿ ಇದ್ದ ದೂಮ ಇದರ ಕೇಳ್ಸಿಕಂಡ್, 'ಅಣ್ಣಾ ನಾ ಇಲ್ಲೆ ಒಳೆ. ನಾ ತೆಗ್ದ್ ಕೊಟ್ಟನೇಂತ' ಹೇಳಿ, ಸರಸರಾಂತ ಮರ ಹತ್ತಿ ಜೇನ್ ಎರಿಗಳ ತೆಗ್ದ್ ಕೊಟ್ಟಿತ್. ಅಂವ ಇಳ್ಯಕನ ಅಂವಂಗೆ ಎರ್ಡ್ ಬೊಡ್ದ್, ನೀ ನಮ್ಮೊಟ್ಟಿಗೆ ಬಾದು ಬೇಡಾಂತ ಹೇಳ್ತಿಲ್ಲೆ? ಯಾಕೆ ಬಂದಾಂತ ಅವನ ಹಿಂದಕ್ಕೆ ಕಳ್ಸಿದೊ.

ಆಗ ದೊಡ್ಡ ತಮ್ಮ ಕೇಳ್ತ್, 'ಅಂವಂಗೆ ಜೇನ್ ತಿಂಬಕೆ ಕೊಟ್ಟತ್ತಿಲ್ಲಾಂತ' ಅದಕ್ಕೆ ಅಜ್ಜಪ್ಪ, 'ಅಂವಂಗೆ ಜೇನ್ ಕೊಟ್ಟರೆ ಇವುಕೆ ತಿಂಬಕೆ ಕಮ್ಮಿ ಆದೆಲೆ ಅದ್ಕೆ ಅಂವನ ಓಡ್ಸಿದ್‌ಂತ' ಹೇಳ್ದೊ. ಆಗ ನಾ, 'ಕೆಲ್ಸಕ್ಕೆ ಅಂವ ಬೇಕ್. ತಿಂಬಕೆ ಇವೂಂತ" ಬೇಜಾರ್ಲಿಲಿ ಹೇಳ್ದೆ. ಸಣ್ಣ ತಮ್ಮ 'ಪಾಪ'ಂತ ಹೇಳ್ತ್. ನೀವು ಕತೆ ಕೇಳ್ರೆನೊ ಹಿಂಗೆ ಎಡೆಎಡೆಲಿ ಬಾಯಿ ಹಾಕಿ ಕತೆನ ಹಾಳ್ ಮಾಡ್ರೆನೋಂತ ಅಜ್ಜಪ್ಪ ಬ್ಯೊದೊ. ' ಇಲ್ಲೆ ಅಜ್ಜಪ್ಪಾ, ಇನ್ ಮಾತಾಡ್ದುಲ್ಲೆ ನೀವು ಹೇಳೀಂತ' ಹೇಳ್ದೊ.

ಅಜ್ಜಪ್ಪ ಕತೆನ ಮುಂದರ್ಸಿದೊ. ಅಣ್ಣಂದರ್ ಕಾಡ್‌ಲಿ ಇದ್ದ ದೊಡ್ಡ ದೊಡ್ಡ ಎಲೆಗಳ ತಂದ್ ಅದರ್ಲಿ ಕಿಳ್ಳಿ ಮಾಡಿ ಜೇನ್‌ನ ಎರಿನ ಹಿಂಡಿ ಜೇನ್ ತೆಗ್ದ್ ಎಲ್ಲೋವೂ ಕುಡ್ದ್ ಮುಂದೆ ಕಾಡ್‌ಲಿ ಹೋದೊ. ಹೆಡ್ಡ ದೂಮ ಹನೀಸ್ ಹಿಂದಕ್ಕೆ ಹೋದಂವ ಅಣ್ಣಂದರಿಗೆ ಗೊತ್ತಾಗದಾಂಗೆ ಅವರ ಹಿಂದೆ ಹಿಂದೆ ಬಾತ್. ಹಾಂಗೆ ಹೋಕನ ಒಂದು ದೊಡ್ಡ ಹಲ್ಸಿನ ಮರಲಿ ಹಲ್ಸಿನಂಣ್ ಹಣ್ಣಾಗಿ ಗಮ ಗಮಾಂತ ಪೊರ್ಮಳ ಬಾತಿತ್ತ್. ಅಣ್ಣಂದರ ಬಾಯಿಲಿ ನೀರ್ ಬಾತ್. ಮರ ಯಾರ್ ಹತ್ತುದು? ಅದ್ ದೊಡ್ಡ ಮರ ಅವುಕೆ ಹತ್ತಿಕೆ ಅಸ್ಟ್ ಗೊತ್ತಿಲ್ಲೆ. ಆಗ ಅವು, ಈಗ ಹೆಡ್ಡದೂಮ ಇರ್ತಿದ್ದರೆ ನಾವ್ಗೆ ಹಣ್ಣ್ ಕ್ಯೊದ್ ಕೊಡ್ತಿತ್ತ್‌ಂತ ಮಾತಾಡಿಕೊಂಡೊ. ಅದರ ಕೇಳ್ಸಿಕಂಡ ಹೆಡ್ಡದೂಮ, 'ಅಣ್ಣಾ ನಾ ಇಲ್ಲಿ ಒಳೇಂತ' ಹೇಳಿ ಸರಸರಾಂತ ಮರ ಹತ್ತಿ ಹಲ್ಸಿನ ಹಣ್ಣ್‌ನ ಮರಂದ ಉದ್ರಿಸಿದೆ. ಅಣ್ಣಂದರ್ ಅಂವ ಇಳ್ಯಕನ ಅಂವಂಗೆ ಸಮಾ ಬೊಡ್ದ್‌ದ್ ಹಿಂದಕ್ಕೆ ಮನೆಗೆ ಕಳ್ಸಿದೊ. ಅವು ನಾಕ್ ಜನಂಗ ಹಣ್ಣ್‌ನ ಕೊಯ್ದ್ ಹೊಟ್ಟೆ ತುಂಬ ತಿಂದ್ ಮುಂದೆ ಹೋದೊ. ನಾವು ಮಕ್ಕ ಇದರ ಕೇಳಿ, ಪಾಪ ಹೆಡ್ಡದೂಮಾಂತ' ಹೇಳಿಕೊಂಡೋ. ಆಗ ಅಜ್ಜಪ್ಪ ನಮ್ಮನೇ ಕೆಕ್ರಿಸಿಕಂಡ್ ನೋಡ್ದೋ. ನಾವು ಬಾಯ್ಮುಚ್ಚಿ, ಬಾಯಿಗೆ ಬೆರ್‌ಳ್ ಇಸಿ ಒಬ್ಬರ ಮೋರೆ ಒಬ್ಬ ನೋಡಿ ಮಾತಾಡ್‌ಬೊಡೀಂತ ಕಣ್ಣ್ ಸನ್ನೆ ಮಾಡಿ ಸುಮ್ಮಂಗೆ ಕುದ್ದೊ.

ಅಜ್ಜಪ್ಪ ಕತೆನ ಮುಂದರಿಸಿದೊ. ಅಣ್ಣಂದರ್ ಮುಂದೆ ಕಾಡಿಗೆ ಹೋಗಿ ಸೌದೆ ಕಡ್ಯಕೆ ಸುರುಮಾಡ್ದೊ. ಆಗ ಅವ್ಕೆ ಹೆಡ್ಡ ದೂಮನ ನೆಂಪಾಗಿ ಅಂವ ಇರ್ತಿದ್ದರೆ ಒಂದು ಗಳ್ಗೆಲಿ ಸೌದೆ ಕಡ್ದ್ ಹೊರೆ ವಡ್ತಿತ್‌ಂತ ಮಾತಾಡಿಕೊಂಡೊ. ಹೆಡ್ಡದೂಮ ಮನೆಗೆ ಹೋಗದೆ ಅವರ ಹಿಂದೆನೆ ಅಡಿಂಗಿಕಂಡ್ ಬಾತಿತ್ತ್. ಇದರ ಕೇಳಿ ಅಂವ ಓಡಿ ಬಂದ್,

ಅಣ್ಣಾ, ನಾ ಇಲ್ಲಿ ಒಳೇಂತ ಹೇಳಿ ಬೇಗ ಬೇಗ ಸೌದೆ ಕಡ್ದ್ ಅವ್ಕೆ ಸಾಯ ಮಾಡ್ತ್. ಸೌದೆ ಕಡ್ದ್ ಎಲ್ಲ ಆಕನ ಅವಂಗೆ ಬೊಡ್ದ್, ನೀ ಇಲ್ಲೇ ಬಿದ್ದಿರ್‌ಂತ ಹೇಳಿ ವು ಸೊದೆನೆಲ್ಲಾ ಹೊತ್ತ್‌ಕಂಡ್ ಮನೆಗೆ ಹೋದೊ. ಆಗ ಕತ್ತಲೆ ಆತ್. ಹೆಡ್ಡದೂಮ ಉಪಾಯ ಇಲ್ಲದೆ ಕಾಡ್‌ಲೇ ಉಳ್ತ್. ಏನ್ ಮಾಡ್ದೂಂತ, ಒಂದು ಮರ ಹತ್ತಿ ಕುದ್‌ಕಂಡತ್. ಇರ್‍ಳ್ ಏನಾರ್ ಕಾಡ್ ಮುರ್ಗಗ ಬಂದರೇಂತ ಅಂವಂಗೆ ಹೆದ್ರಿಕೆ.

ನಡ್ ಇರ್‍ಳ್ ಆಕನ ಅಲ್ಲಿಗೆ ಕೆಲವು ದೆವ್ವಂಗ ಬಂದೊ. ಆ ಮರದ ಕೆಳಗೆ ದೊಡ್ಡ ಕಿಚ್ಚಿನ ಹಾಕಿ ಅದರ ಸುತ್ತ ಕುಣ್ಕಂಡ್ ಬೊಬ್ಬೆ ಹಾಕಿದೊ. ಇದರ ಎಲ್ಲ ಮರದ ಮೇಲ್‌ಂದ ನೋಡ್ದ ಹೆಡ್ಡ ದೂಮಂಗೆ ಹೆದ್ರಿಕೆ ಆತ್. ಅಂವ ಉಸ್ರ್ ಕಟ್ಟಿಕಂಡ್ ಕುದ್ದತ್. ದೆವ್ವಂಗ ಕುಣಿವೊಸ್ಟ್ ಕುಣ್ದ್ ಆ ಮರದ ಕೆಳಗೆ ಮೊಣ್ಣ್‌ನ ಬೊಗ್ದ್ ತೆಗ್ಯಕೆ ಸುರು ಮಾಡ್ದೊ. ಆಗ ಅಲ್ಲಿ ದೊಡ್ಡ ಗುಂಡಿ ಆತ್. ಅದರೊಳಗೆ ಒಂದು ಪೆಟ್ಟಿಗೆ ಇತ್ತ್. ಅದರ ಹೊರಗೆ ತೆಗ್ದೊ. ಅದರ್ಲಿ ತುಂಬಾ ಚಿನ್ನ, ಬೆಳ್ಳಿ, ಮುತ್ತು, ಮಾಣಿಕ್ಯ ಎಲ್ಲಾ ಇತ್ತ್. ಅದರ ತೆಗ್ದ್ ನೋಡಿ ಕುಸಿಂದ ಕುಣ್‌ದೊ. ಪುನಃ ಅದರ್ಲಿ ಹಾಕಿ ಪೆಟ್ಟಿಗೆನ ಬಾಯಿನ ಮುಚ್ಚಿ, ಗುಂಡಿ ಒಳಗೆ ಇಸಿ ಮೊಣ್ಣ್ ಮುಚ್ಚಿದೊ. ಅಷ್ಟಾಕನ ಬೊಳ್‌ಪು ಆತ್. ಆಗ ಅವೆಲ್ಲಾ ಅಲ್ಲಿಂದ ಮಾಯ ಆದೊ. ಅದರ ಮರದ ಮೇಲ್‌ಂದ ನೋಡ್ದ ಹೆಡ್ಡ ದೂಮಂಗೆ ಸೋಜಿಗ ಆತ್. ಕುಸಿನೂ ಆತ್. ಪಳ್ಳಂಗೆ ಬೊಳ್ಪಾಕನ ಮರಂದ ಅಂವ ಇಳ್ತ್. ಮರದ ಕೆಳಗೆ ಇದ್ದ ಗುಂಡಿನ ಬೊಗ್ದ್ ಪೆಟ್ಟಿಗೆನ ಹೊರಗೆ ತೆಗ್ತ್. ಅದರ ಹೊತ್ತ್‌ಕಂಡ್ ಮನೆಗೆ ಬಾತ್.

ಅಂವನ ಅವ್ವ ಮಜ ಬಾತಿಲ್ಲೇಂತ ತುಂಬಾ ಬೇಜಾರ್ಲಿ ಇತ್ತ್. ಅಣ್ಣಂದರ್ ಅವ್ವನೊಟ್ಟಿಗೆ, ಕಾಡ್‌ಲಿ ಅಂವನ ಹುಲಿ ಹಿಡ್ತ್‌ಂತ ಸುಳ್ಳು ಹೇಳಿದ್ದೊ. ಮಂಜನ ನೆನ್ಸೆಕಂಡ್ ಅಯ್ಯೆ ಮೊರ್‍ಟ್‌ಕಂಡ್ ಇರಿಕನ ಬಾಗಲ್ ಬೊಡ್ದ ಸದ್ದಾತ್. ಬಾಗಿಲ್ ತೆಗ್ದ್ ನೋಡ್ರೆ ಹೆಡ್ಡದೂಮ ಭಾರದ ಪೆಟ್ಟಿಗೆನ ಹೊತ್ತ್‌ಕಂಡ್ ಬಾಗ್ಲಿಲ್ ನಿತ್ತುಟ್ಟು. ಅವ್ವ ಅವನ ತಲೆಂದ ಹೊರೆ ಇಳ್ಸಿ ಅಂವಂಗೆ ಕುಡ್ಯಕೆ ಕೊಟ್ಟತ್. ಪೆಟ್ಟಿಗೆ ಮುಚ್ಚಳ ತೆಗ್ದ್ ನೋಡಿಕನ ಅದರೊಳಗೆ ಚಿನ್ನ, ಬೆಳ್ಳಿ, ಮುತ್ತು, ಮಾಣಿಕ್ಯ ಇತ್ತ್. ಅವ್ವಂಗೆ ಸಂತೋಸ ಆತ್. ಅಣ್ಣಂದರ್ ಇದರ ನೋಡಿ ಇದೆಲ್ಲಾ ನಿಂಗೆ ಹೇಂಗೆ ಸಿಕ್ಕಿತೂಂತ ಕೇಳ್ದೊ. ಅಂವ ನಡ್ದ ವಿಷಯ ಎಲ್ಲಾ ಹೇಳ್ತ್. ಅಣ್ಣಂದರ್ ನಾವುನೂ ಇಂದ್ ಪೋಯೀಂತ ಹೊರ್‍ಟೊ. ಕಾಡಿಗೆ ಹೋಗಿ ತಮ್ಮ ಹೇಳ್ದ ಮರದ ಮೇಲೆ ಕುದ್‌ಕೊಂಡೊ. ನಡ್ ಇರ್‍ಳ್ ಆಕನ ದೆವ್ವಂಗ ಬಂದೊ. ಕಿಚ್ಚಿ ಹಾಕಿ ಅದರ ಸುತ್ತ ಕುಣ್ದೊ. ಮೊಣ್ಣ್‌ನ ಬೊಗ್ದ್ ನೋಡ್ದೊ. ಅಲ್ಲಿ ಪೆಟ್ಟಿಗೆ ಇತ್ಲೆ. ದೆವ್ವಂಗಳಿಗೆ ಸಿಟ್ಟ್ ಬಾತ್. ಅವು ಮರ ಮೇಲೆ ಕುದ್‌ಕಂಡ್ ಇದ್ದ ಅಣ್ಣಂದರ ನೋಡ್ದೊ. ಅವರ ಎಳ್ದ್ ಹಾಕಿ ಬೊಡ್ದ್ ಕೊಂದೊ. ಕತೆನ ಕೇಳಿ ನಾವೆಲ್ಲಾ ಹೆಡ್ಡದೂಮ ಬಂಗ ಬರ್ಸಿದಕ್ಕೆ ಅಣ್ಣಂದರಿಗೆ ಹಾಗೇ ಆಕೂಂತ ಹೇಳಿಕಂಡ್ ಅಲ್ಲಿಂದ ನೀರಡಿಗೆ ಮೀಯಕ್ಕೆ ಓಡ್ದೊ.



# ಬಾನಜ್ಜ ಗುಡ್ಗಿದೆ

ಎಂ.ಜಿ ಕಾವೇರಮ್ಮ

ಬಾನಜ್ಜ ಗುಡ್ಗಿದೆ
ಭೂಮಿನು ನಡ್ಗಿದೆ
ಆಗಾಗ ಮಿಂಚುನು
ಫಳ್ಳಂಗೆ ಮಿಂಚಿದೆ
ಗುಡ್ಗಜ್ಜನ ಆರ್ಭಟೆ
ಜೋರು ಜೋರಾದೆ
ಮಕ್ಕಂಗ ಹೆದ್ರಿ
ಗುಡಿಹೊದ್ದ್ ಮಲ್ಗಿದೊ.
ದನಂಗೆಲ್ಲ ಓಡೋಡಿ
ಹಟ್ಟಿಗೆ ಬಂದೊ
ಬಾಗಿಲ್ ಕಿಡ್ಕಿಗ
ತಟ ಪಟ ಬಡ್ಕಂಡೊ
ಕಬ್ಬಿಣದ ಕತ್ತಿನ
ಜಾಲಿಗೆ ಇಟ್ಟೋ
ಸೋರುವ ಕಡೆಗೆಲ್ಲ
ಪಾತ್ರಾನ ಇಟ್ಟೊ
ಬಾನ್ ತೂತಾದಂಗೆ
ಜೋರುಂದ ಮಳೆ ಬಾತ್
ಗಾಳಿನ ರಭಸಕ್ಕೆ
ಗಿಡ ಮರ ಅಲ್ಲಾಡ್ತ್
ಕಸಕಡ್ಡಿ ಮೊಣ್ಣೆಲ್ಲ
ನೀರ್‌ಲಿ ಕೊಚ್ಚಿ ಹೋತ್

ಆ ಕರೆ ಈ ಕರೆ
ಹಳ್ಳಾನ ಹಾಂಗಾತ್
ಕೆಂಪುನ ನೀರ್
ಜಾಲಿಲಿ ತುಂಬಿತ್ತ್
ಗುಡ್ಗುನು ನಿಂತತ್
ಮಿಂಚಿನು ಹೋತ್
ಮಳೆನು ನಿಂತತ್
ಭೂಮಿ ತಂಪಾತ್
ಮಕ್ಕ ಎಲ್ಲಾ ಎದ್ದೊ
ಹೊರಗಡೆ ಬಂದೊ
ನೀರ್‌ನ ನೋಡ್ದೋ
ಕಾಗ್ದನ ಹರ್ದೋ
ದೋಣಿನ ಮಾಡ್ದೋ
ಉರ್ಡಿಕಂಡ್ ಉರ್ಡಿಕಂಡ್
ಆಟನು ಆಡ್ದೊ
ಕೋಲ್‌ನ ಹಿಡ್ಕಂಡ್
ಅವ್ವನು ಬಾತ್
ಮಕ್ಕಳ ಬೆನ್ನಿಗೆ
ರಪ ರಪ ಬಾರ್ಸಿತ್
ಎದ್ದ್ ಕಂಡ್ ಬಿದ್ ಕಂಡ್
ಮಕ್ಕಾನು ಓಡ್ದೋ

# ಪೋಯಿಯ ಹೈದ

ಪೋಯಿಯ ನಾವು ಪೋಯಿಯ
ಸಮುದ್ರ ನೋಡಿಕೆ ಸೂರ್ಯಸ್ತ ನೋಡಿಕೆ
ತೆರೆನ ನೋಡಿಕೆ, ಚಿಪ್ಪುನ ಹೆರುಕ್ಕಿಕ್ಕೆ
ಬಂದು ಬುಟ್ಟೆ, ನಾ ಪಣಂಬೂರು ಬೀಚುಗೆ,
ಬೀಸಿದ ಗಾಳಿನ ರಬಸಕ್ಕೆ ನೆಲ ನೋಡಿಕೆ ಬೊತ್ತಿತ್ತು.
ಅಲ್ಲಿಗೆ ಬಂದ ಪ್ರೇಮಿಗ ಹಿಂಗೆ ಹೇಳುತಿದ್ದೊ.
ಮೊದುವೆ ಅವನಾ ನನ್ನ ನೀ. ಅಷ್ಟೋತ್ತಿಗೆ
ಅಲ್ಲಿಗೆ ಹೈದಂಗಳ ಗಾಳಿ ಬೀಸಿಕೆ ಸುರು ಆಗಿತ್ತು,
ಇಷ್ಟೆಲ್ಲ ಹೇಳ್ದ ಮೇಲೆ ಹೈದ, ಸಮುದ್ರದ ಮೇಲೆ
ಬೀಸುವ ಗಾಳಿನಂಗೆ ಬಂದ ಹೈದ
ತೆರೆ ಬಂದು ದಡಕ್ಕೆ ಹೊಡದಾಂಗೆ ಆಗಿ ಮನೆಗೆ ಹೊರಟ್ಟೊತ್ತು.
ಅವನ ಮೊರೆ ನೋಡಿಕೆ ಹೋದ
ಮತ್ತೊಂದು ಹೈದ ಹಿಂಗೆ ಹೇಳುತ್ತಿತ್ತು
ಗಾಳಿಗೆ ಅವನ ಕೂದಲು ಕೆದ್ಲು ಹುಲ್ಲುನಾಂಗೆ
ಆಚೆ-ಇಚೆ ಅಲ್ಲಾಡುತ್ತಿತ್ತು. ಅಷ್ಟೆನಾ ….. ಅಲ್ಲ
ಹೆದುರಿ ಬೆಗುರಿಕೆ ಸುರು ಆಗಿತ್ತು
ಅಂಗಿ ಬನಿಯನ್ನು ಚಡ್ಡಿ ಎಲ್ಲಾ ಚಂಡಿ ಆಗಿತ್ತು
ಮಳೆ ನೀರುಲಿ ನೆಂದ ಹಾಂಗಿತ್ತು
ಕಣ್ಣು ಕೆಂಪು ಆಗಿತ್ತು
ಮೊರೆ ದಪ್ಪ ಆಗಿತ್ತು
ತಿರುಗ್ಗಿ ನೋಡಕರೆ ನಂಗೆ ಮನೆಗೆ ಎತ್ತಿ ಆಗಿತ್ತು.

**ಲೋಕೇಶ್ ಕುಂಚಡ್ಕ**

# ನಮ್ಮ ಭಾಷೆ

ನಮ್ಮದ್ ಇದ್ ನಮ್ಮದ್
ಅರೆಕನ್ನಡ ಬಾಷೆ ನಮ್ಮದ್॥

ಹೆತ್ತವ್ವ ಕಲ್ತದ್ ಅರೆಕನ್ನಡ
ಅಪ್ಪವ್ವ ಮಾತಾಡ್ದು ಅರೆಕನ್ನಡ
ನಾವೂನೂ ಮಾತಾಡ್ದು ಅರೆಕನ್ನಡ/ನಮ್ಮ
ಮಕ್ಕಳಿಗೂ ಕಲ್ಸುದೆ ಅರೆಕನ್ನಡ//

ಜಾತಿ ಬಾಸೆಗೆ ಉಟ್ಟು ಎಲ್ಲವುಕೆ
ಅವರವರ ಭಾಸೆನೆ ದೊಡ್ಡದವುಕೆ
ಯಾಕಾದುಲೆ ನೀವುಗೆ ಇದ್ ಮಾತಾಡಿಕೆ ನಮ್ಮ
ಮನ್ಸೊಳಗೆ ಬರೋಕು ಇದ್ ಎಲ್ಲೋವುಕೆ॥

ಬೇರೆ ಭಾಸೆಗೆ ಕೂಡ ನೀವ್ ಕಲಿಯೋಕು
ಬೇರೆ ಕಡೆ ಹೋಕನದ್ ಮಾತಾಡೊಕು
ಕಲಿದು ಬೇಡಂತೇಳ್ದುಲೆ ಬೇರೆ ಭಾಸೆ/ನಮ್ಮ
ನಮ್ಮಲೆ ಇರಕು ಇದ್ ನಮ್ಮ ಭಾಸೆ॥

ನಮ್ಮ ದೇಶಲಿ ಉಟ್ಟು ಎಸ್ಟೋ ಭಾಸೆ
ಅವುಕವುಕೆ ಸರಿಯಾಗಿ ಜಾತಿಮತಕೆ
ಕನ್ನಡಲೆ ಮಾತಾಡ್ದು ನೀ ಎಂತಕೆ ನಮ್ಮ
ಭಾಸೆನ ಬೊತ್ಯಾಕೆ ನೀವ್ ಕಲಿಯಕೆ

ಮಾತೃ ಭಾಸೆಗೆ ನೀವು ಮೋಸ ಮಾಡಿ
ಯಾರ್‍ಯಾರ ಭಾಸೆಗಳ ಪೋಷಣೆ ಮಾಡಿ
ಏನ್ ಸಾರ್ಥಕ ನೀವ್ ಹಿಂಗೆ ಮಾಡಿ/ನಮ್ಮ
ತಾಯಿ ಭಾಸೆನ ನೀವಂ ದೂರ ಮಾಡಿ॥

ಮಮ್ಮಿ ಡ್ಯಾಡಿ ಹೆಸ್‌ರ್ ನಮ್ಮದಲ್ಲ
ಅಪ್ಪ ಅಮ್ಮ ಪದವೆ ನಾವ್ಗೆ/ನಮ್ಮ

ಕನ್ನಡದ ತಿಳಿಬಾಸೆ ಸಾಕ್ ನಾವ್ಗೆ॥
ನಮ್ಮ ಭಾಸೆನ ನಾವ್ ಕೊಂಡಾಡೊಕು
ಅರೆಕನ್ನಡ ನಾವ್ ಮುದ್ದಾಡೊಕು
ಗೊತ್ತಲ್ಲದವು ನೀವ್ ಇದ್ ಕಲಿಯೋಕು।ನಮ್ಮ
ಭಾಸೆನ ಬೆಳಕಿಗೆ ನಾವೇ ತರೋಕು॥

**ಹೊದ್ದೆಟಿ ಭವಾನಿ ಶಂಕರ**



# ದೇಶಾಭಿಮಾನ

ನಮ್ಮರೋಡುನೋಡಿ ರಾಡಿಯಾವುಟು
ಗೆದ್ದವನ ಮನೆ ನೋಡಿ ಅರಮನೆ ಯಾವುಟು
ಬಿದ್ದವನ ಅಂಗಿನೋಡಿ ಹೆಂಗೂಟ್ಟು
ಬಿದ್ದು ಎದ್ದವೆಅಲಾ, ಅವೇ ಯಾಗೋಳು ಮುಂದೆ ಬಾದು.

ಅಮ್ಮ ತೇಳರೆ ದೇವುರು ನಾವುಗೆ
ಅದೇ ಅಮ್ಮನ ಹೊಟ್ಟೆನ ಬೊಗ್ದ್ ಎಳ್ದವೆ ನೋಡಿ ಇಂದು!
ಎಲ್ಲಿ ಹೋತು ಅಮ್ಮ ತೇಳುವ ಅಭಿಮಾನ
ಇದಕ್ಕೆ ಹೇಳ್ದು ಸ್ವಾರ್ಥ ತೇಳ.

ಈ ಮಕ್ಕಳಗೆಲ್ಲಾ ಬುದ್ಧಿ ಬಾದು ಯಾಗ ಹೇಳ
ಸತ್ತ ಮೇಲೆ ಈಸುವೆ ಅಲಾ ಕಾಟಕ್ಕೆ ಇಸಿಕನನ
ಒಬ್ಬನೋಟ್ಟಿಗೆ ಮಾತಾಡಿಕೆ ಬೋತ್ತು
ಹಂಗೆ ಅವುಟು ಇಂದು ನಮ್ಮ ಸ್ಥಿತಿ

ಇದು ನಮ್ಮವರ ದೇಶಾಭಿಮಾನ ನೋಡಿ
ಒಮ್ಮೆ ರುಚಿ ಸಿಕ್ಕಿದ ಮೇಲೆ ಮತ್ತೆ ಬುಡಿಕಿಲೆ ನೋಡಿ
ಬಾಯಿ ಬುಟ್ಟರೆ ಹೇಳುವೆ ಸುಳ್ಳು
ಇದುಕ್ಕೆ ಮೊದ್ದು ನೀವೆ ಹೇಳ

**ಲೋಕೇಶ್ ಕುಂಚಡ್ಕ**

# ದೋಷ

ಹಿದ್ದದಾತ್ಲೆ ಮುಟ್ಟಿದಾತ್ಲೆ ಎಲ್ಲ ದೋಷನೆ
ಕೇಳ್ಬಡಿ ನೀವ್ ಜೋಯಿಸನ ಎಲ್ಲ ಮೋಸನೆ
ಹಾವು ಮನೆಗೆ ಬಂದರಾತ್ ಅದ್ ದೋಷನೆ
ಉಡು ಮನೆಗೆ ಹುಕ್ಕರಾತ್ ಸರ್ವನಾಸನೆ

ಕಲ್ನೀರ್ ಮಿಂದರೆ ಹೊಲ್ಸ್ ಹೋದೆಂತ
ಬೊಗಳೆ ಬುಡು ಹಾರವನು ಮಹಾ ಮೋಸನೆ

ಗಲ್ಲಿಗಲ್ಲಿಲೆಲ್ಲ ನಡಿದು ಅಷ್ಟಮಂಗಲ
ಕಟ್ಟಿ ಇಸಿದ ಅಡ್ಕೆ ಮಾರಿ ನಷ್ಟಮಂಗಲ
ಊರು ಕಾಡ್‌ಲಿರುವ ದೇವ್ರ ಎಳ್ದ್ ತಂದವೆ

ಮೊಣ್ಣು ನಡಿಲಿ ಸಿಕ್ಕಿದ ಮೂರ್ತಿ ಒಕ್ಕಿ ತೆಗ್ದವೆ
ಕಾಡ್ ಮೇಡ್ ಊರುಲಿರುವ ದೆವ್ವ ಗುಳಿಂಜನೋ
ಜೋಯಿಷನ ಮಾತ್‌ಕೇಳಿ ಮರ್ತ್ ಬಜನೋ
ಕಲ್ಲು ಕುಂಟೆ ಮರಗಳೆಲ್ಲ ಹೊತ್ತ್ ತಂದವೆ
ಗುಡಿಗ ಸ್ಥಾನ ಕಟ್ಟೆ ಕಟ್ಟಿ ಕುಟ್ಟೆ ಹೋದವೆ

ದೊಡ್ಡ ದೊಡ್ಡ ದನಿಗ ಲಕ್ಷ ಲಕ್ಷ ಕೊಟ್ಟವೆ
ಪಾಪದವು ಕೀಲೆ ಅಡ್ಕೆ ಕಾಯಿ ತರೋವೆ
ನೆಟ್ಟಿ ಗದ್ದೆಂದ ಸೋಂತೆ ಕುಂಬಳ ಉರುಂಬಿ ತಂದವೆ
ಹಗಲು ಇರ್ಲ್ ಮಾಡ್ ಚಪ್ಪರ ಜಾಲ್ ಗುದ್ದುವೆ

ದುದ್ದ್ ದುದ್ದ್ ಹುಡ್ಗರ್‌ದೆಲ್ಲ ರಟ್ಟೆ ಬೆಂದದೆ
ತಿಂದ್ ತಿಂದ್ ಹಾರಂವನ ಹೊಟ್ಟೆ ಬೆಳ್ದದೆ
ಕುರೆಗಳಿಗೆ ಮೇಪತದ್ ಕಾಚ್‌ಪುಳ್ಳನೇ
ದೊರೆಗ, ಮಂತ್ರಿ, ಜನಕೆ ಎಲ್ಲ ತಂತ್ರಿ ಮಂತ್ರನೇ

ದೆವ್ವ ಗುಳಿಂಜ ವಿಷ್ಣುಮೂರ್ತಿ ಮಾಮಾಯಿ ಎಡೆಲ್ಯದ್
ನುರ್ಕಿ ಹುಕ್ಕಳ ರಾಮ ಕೃಷ್ಣಂಗ ಇವರ ಎಡೆಲ್ಯದ್
ಹಂದಿ ಕೋಳಿ ಹಿಟ್ಟ್ ಅಗೆಲ್ ಬಟ್ಸ್‌ಗಾದುಲೆ
ಗೌಡ, ಬಂಟ, ನಾಯ್ಕ, ಕಳ್ಳ್ ಚೂರು ಬುಡಿಕಿಲೆ
ಬೆಲ್ಲ ಕಾಯಿ ಅಪ್ಪ ಕಜ್ಜಾಯನೆಲ್ಲ ತಿನ್ಸಿದ
ದೆವ್ವಂಗಳಿಗೂ ವೆಜ್ ನನೇ ಮತ್ತೆ ಕಲ್ಸಿದ

ಮಂತ್ರಿ ತಂತ್ರಿ ಸಾಮಿಗಳ ಮತ್ತೆ ಕರ್ಸ್‌ವೆ
  ಕವಡೆ ಕಾಳ್‌ನೆಲ್ಲ ತಿರ್ಗ ಮೊಗ್ಚಿ ನೋಡುವೆ
  ಅದ್ ಇದ್‌ಂತೇಳಿ ಜನರ ಎತ್ತಿ ಕಟ್ಟ್‌ವೆ
  ಅದರ ಕೇಳಿ ಜನಗ ಪೂರ ಹುಚ್ಚಿ ಕಟ್ಟ್‌ವೆ
  ನಮ್ಮ ತಲೆಲಿ ಅವರದೊಂದು ಮುಗುಳಿ ನೆಟ್ಟವೆ
  ಗೈದ್ ಕೊಟ್ಟು ಇವರ ಪುಕುಳಿ ಹಳ್ಳಕಿಟ್ಟವೆ.

ಯಶವಂತ ಕುಡೆಕಲ್ಲು

ಅಡುಗೆ



ಬಾರಿಯಂಡ ಭಾರತಿ

## ಮಾವ್‌ನ ಕಾಯಿ ಚಿತ್ರಾನ್ನ

**ಬೇಕಾದ ವಸ್ತುಗ:**

1. ಗಿಣಿ ಮಾವ್‌ನ ಕಾಯಿ ಇಲ್ಲರೆ
   ಗೋವು ಮಾವ್‌ನ ಕಾಯಿ–4
2. ಹಸಿ ಮೆಣ್ಸ್–4
3. ½ ಗಡಿ ತೆಂಗ್‌ನ ಕಾಯಿ
4. ½ ಚಮಚ ಮೆಂತೆ ಹೊಡಿ
5. ½ ಚಮಚ ಅರಿಸಿಣ ಹೊಡಿ
6. 100 ಗ್ರಾಂ ಸನ್ ಪ್ಯೂರ್ ಎಣ್ಣೆ
7. ಒಗ್ಗರಣೆ ಸೊಪ್ಪು
8. ಎರಡು ಹಿಡಿಯಷ್ಟ್ ನೆಲಗಡಲೆ
9. ದೊಡ್ಡ ನಿಂಬುಳಿ ದಪ್ಪದಷ್ಟ್ ಬೆಲ್ಲ
10. ಒಂದಿಷ್ಟ್ ಉಪ್ಪು

**ಮಾಡ್‌ವ ಕ್ರಮ:**

ಮಾವ್‌ನ ಕಾಯಿದ್ ಸಿಪ್ಪೆ ತೆಗ್ದ್ ತುರಿಯೊಕು ½ ಗಡಿ ತೆಂಗ್‌ನ ಕಾಯಿ ಮತ್ತೆ 4 ಮೆಣ್ಸ್‌ನೊಟ್ಟಿಗೆ ನೀರ್ ಹಾಕಣದೆ ಮಿಕ್ಸಿ ಮಾಡೊಕು ನೆಲಕಡ್ಲೆನ ಎಣ್ಣೆಲಿ ಹೊರ್ದ್

ತೆಗ್ದ್ ಇಳ್ಸಿಕಂಬಕು ಅದೇ ಎಣ್ಣೆಗೆ ಮಿಕ್ಸಿ ಮಾಡ್ದ ತೆಂಗ್‌ನ ಮತ್ತೆ ಮೆಣ್ಸ್ ಪಾಕ, ಮೆಂತೆ ಹೊಡಿ, ಅರಿಸಿಣ ಹೊಡಿ, ಒಗ್ಗರಣೆ ಸೊಪ್ಪು, ತುರ್‌ದ ಮಾವ್ನ ಕಾಯಿ, ರುಚಿಗೆ ತಕ್ಕ ಉಪ್ಪು, ಹೊಡಿ ಮಾಡ್ದ ಬೆಲ್ಲನ ಹಾಕಿ ಲಾಯ್ಕ ಮೇಕೊಕು. ಒಲೆಂದ ಇಳ್ಸಿ ಚಣ್ಣ ಮೇಲೆ ಡಬ್ಬಿಗೆ ಹಾಕಿ ಇಸಿಕಂಬಕು.

ಹೊಡಿ ಹೊಡಿ ಆಗಿರುವ ಅನ್ನಕ್ಕೆ ಎಷ್ಟ್ ಬೇಕೊ ಅಷ್ಟ್ ಈ ಪಾಕನ ಮಿಶ್ರ ಮಾಡಿ ಊಟಕ್ಕೆ ಇಸ್‌ಕನ ಹೊರ್ದ್ ಇಸಿಕಂಡ ನೆಲಕಡ್ಲೆನ ಚಿತ್ರಾನ್ನದ ಮೇಲೆ ಹರ್‌ಂಡಿಕಂಡ್ ತಿಂದರೆ ಬೆಳಿಗ್ಗೆ ಅವ್ವ ಮಾಡಿಕೊಟ್ಟ ಚಿತ್ರಾನ್ನದ ರುಚಿನ ಮರ್ಯಕಾದುಲೆ.

## ಕಂಬ್ಳಿ ಹಣ್ಣ್‌ದ್ ಜಾಮ್

**ಬೇಕಾದ ವಸ್ತುಗ:**

1. ಪೂರ್ತಿ ಹಣ್ಣಾದ ಮತ್ತೆ ಸಾಧಾರಣ ಹಣ್ಣಾದ ಸಮ ಪ್ರಮಾಣದ ಅರ್ಧ ಕಿಲೋದಷ್ಟು ಕಂಬ್ಳಿ ಹಣ್ಣ್
2. ಕಾಲ್ ಕಿಲೋ ಸಕ್ಕರೆ
3. ಚಿಟಿಕೆ ಉಪ್ಪು

**ಮಾಡುವ ಕ್ರಮ:**

ಹಣ್ಣ್‌ನ ಲಾಯ್ಕ ತೊಳ್ದ್ ಒಂದು ಲೋಟ ನೀರೊಟ್ಟಿಗೆ ಕುಕ್ಕರ್‌ಲಿ ಬೇಸೊಕು. ಒಂದ್ ಶಿಳ್ಳೆ ಆಕನ ಆಫ್ ಮಾಡಿ ಇಳ್ಸಿ ತಣ್ಣಂಗೆ ಆದ ಮೇಲೆ ಲಾಯ್ಕ ಕಿವ್ ಚೊಕು. ಗೊಧಿ ಹೊಡಿ ಒಂಚುವ ಸಣ್ಣ ಕಣ್ಣ್ ಒಂದ್ರಿಲಿ ಒಂಚಿದಂಗೆ ಮಾಡಿ ರಸ ತೆಗಿಯೊಕು. ಸಿಕ್ಕಿದ ರಸನ ಕಾಲ್ ಕಿಲೊ ಸಕ್ಕರೆಯೊಟ್ಟಿಗೆ ಕೊದ್‌ಸೊಕು. ಕೊದಿಯಕನ ಒಂದ್ ಚಿಟಿಕೆ ಹೊಡಿ ಉಪ್ಪು ಹಾಕೊಕು.  ಒಲೆಂದ ಇಳ್ಸಿ ತಣ್ಣಂಗಾದ ಮೇಲೆ ನೀರ್ ಪಸೆ ಇಲ್ಲದ ಡಬ್ಬಿಗೆ ತುಂಬುಸಿಕಂಬಕು.

ಹಿಂಗೆ ತಯಾರಾದ ಪಾಕನ ಜ್ಯೂಸ್‌ನಂಗೆ ಮಾಡಿಕಂಡ್ ಕುಡಿಯಕ್, ಅಷ್ಟೆ ಅಲ್ಲ, ದೋಸೆಗೆ, ರೊಟ್ಟಿಗೆ,ಚಪಾತಿಗೆ ಮತ್ತೆ ಬ್ರೆಡ್‌ಗೆ ಪೂಜಿಕಂಡ್ ತಿಂದರೆ ಆಹಾ! ತಿಂದದ್ ಎಷ್ಟ್‌ತ ಲೆಕ್ಕ ಮನಿ ಸಿಕ್ಕಿಕಿಲೆ.



# ವೀರ ಗೌಡರ್

ಗಂಡ್ ಮೆಟ್ಟಿದ ನಾಡ್...
ಇಲ್ಲೇ ಹುಟ್ಟಿದ ಗೌಡರ್ ನಾವು...
ವೀರ-ಶೂರರ್...
ಜಗತ್ತಿಗೆ ಸಾರಿ ಹೇಳ್ದ ಗೌಡರ್... ॥

ಬ್ರಿಟೀಷರ ದಾಸ್ಯಲಿತ್ತ್ ಕೊಡಗ್...
ಸ್ವಾತಂತ್ರಕ್ಕಾಗಿ ಹೋರಾಟ - ಹೊಡೆದಾಟ...
ಗೌಡ ಕಟ್ಟಿತ್ ಸೈನ್ಯ
ಹೊಡ್ದಾಕಿತ್ ಬಿಳಿ ಮನ್ಸರನ್ನ... ॥

ಕುತಂತ್ರ ಮಾಡ್ದೊ ಯಾರ್‍ಯಾರೊ...
ಮೋಸಕ್ಕೆ ಬಲಿಯಾದೊ ನಮ್ಮವ್
ಗುಲಾಮಗಿರಿ ಒಪ್ಪಿತ್ಲೆ ಯಾರೂ...
ಸೆರೆಯಾದೊ ಕತ್ತಲೆ ಕೋಣೆಲಿ.. ॥

ಕೊದಿತಿತ್ತ್ ಗೌಡನ ನೆತ್ತರ್...
ಕಾರ್‌ದ ಕಿಡಿಗೆ ಹೆದ್ರಿಬುಟ್ಟೊ ಬೆಳಿಯರ್
ತೂಂಗಿ ಹಾಕಿದೊ ಗೌಡನ ಎಲ್ಲರೆದ್‌ರ್...
ಹಾರಿ ಹೋತು ಗೌಡನ ಉಸ್‌ರ್... ॥

ಹುತಾತ್ಮರಾದೊ ವೀರ ಅಪ್ಪಯ್ಯಗೌಡರ್
ಯಿಗಲೂ ನಾವ್ ವೀರ ಗೌಡರ್...
ಅಪ್ಪಯ್ಯ ಗೌಡರೇ ನಮ್ಮ ಉಸ್‌ರ್
ಅವೆ ನಮ್ಮ ಸುರುನ ನಾಯಕರ್ ॥

**ಕುಡೆಕಲ್ ಸಂತೋಷ್**

# ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

## ಅಧ್ಯಕ್ಷರು ಮತ್ತು ಸದಸ್ಯರು



**ಶ್ರೀ ಕೊಲ್ಯದ ಗಿರೀಶ್**
ಅಧ್ಯಕ್ಷರು

ಮಡಿಕೇರಿ ತಾಲೂಕು, ಮದೆ ಗ್ರಾಮದ ಶ್ರೀ ಕೊಲ್ಯದ ರಾಮಪ್ಪ ಮತ್ತೆ ಶ್ರೀಮತಿ ಭವಾನಿಯವರ ಮಂಙ ಕೊಲ್ಯದ ಗಿರೀಶ್ 1966 ರಲ್ಲಿ ಮಡಿಕೇರಿಲಿ ಜನ್ಸಿದೊ.

ಬಾಲ್ಯದ ಓದು ಮಡಿಕೇರಿಲಿ ಮುಗ್ಸಿ ಪುತ್ತೂರ್‌ನ ವಿವೇಕಾನಂದ ಕಾಲೇಜ್‌ಲಿ ಬಿ.ಕಾಂ.ಪದವಿನ ಪಡ್ಕೊಂಡೊಳೊ ಕಾಲೇಜ್ ಜೀವನಲಿ ಒಳ್ಳೆ ನಾಯಕತ್ವ ಗುಣ ಮೈಗೂಡಿಸಿಕೊಂಡ ಇವು ಚದುರಂಗ ಆಟಗಾರರಾಗಿ ಮಂಗಳೂರು ವಿಶ್ವವಿದ್ಯಾನಿಲಯನ ಪ್ರತಿನಿಧಿಸಿಯೊಳೊ. ಬೆಂಗಳೂರ್‌ಲಿ ಸಿ.ಎ.ಇಂಟರ್‌ಮಿಡಿಯೇಟ್ ಮಾಡಿ ವಿಪ್ರೋ ದಂತಹ ಹಲವು ಪ್ರತಿಷ್ಠಿತ ಕಂಪೆನಿಲಿ ದುಡ್ದೊಳೊ. ಮತ್ತೆ ಹುಟ್ಟೂರಿಗೆ ಮರಳಿ ಸಹಕಾರ ಕ್ಷೇತ್ರಕ್ಕೆ ಪ್ರವೇಶಿಸಿ ಮದೆ ಕೃಷಿ ಪತ್ತಿನ ಸಹಕಾರ ಬ್ಯಾಂಕ್‌ಲಿ ಅಧ್ಯಕ್ಷರಾಗಿ 10 ವರ್ಷ ನಿರ್ದೇಶಕರಾಗಿ ಸೇವೆ ಸಲ್ಲಿಸೊಳೊ.

ಧಾರ್ಮಿಕ, ಸಾಮಾಜಿಕ ಕ್ಷೇತ್ರ ಅಲ್ಲದೆ ಇವು ರಾಜಕೀಯ ರಂಗದಲ್ಲಿ ಗುರ್ತಿಸಿಕೊಂಡೊಳೊ.

ಮದೆ ಮಾದುರಪ್ಪ ದೇವಸ್ಥಾನ ಜೀರ್ಣೋದ್ದಾರ ಸಮಿತಿ ಉಪಾಧ್ಯಕ್ಷರಾಗಿ, ಗುಡ್ಡೆಮನೆ ಅಪ್ಪಯ್ಯಗೌಡರ ಸ್ಮಾರಕ ಸಮಿತಿ ಸದಸ್ಯರಾಗಿ ಮದೆ ಗೌಡ ಸಮಾಜದ ಸ್ಥಾಪಕ ಅಧ್ಯಕ್ಷರಾಗಿ ಅರಣ್ಯ ಸಮಿತಿ ಸದಸ್ಯರಾಗಿ ಸೇವೆ ಸಲ್ಲಿಸಿಯೊಳೊ.

ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ವಿಶೇಷ ಆಹ್ವಾನಿತರಾಗಿರ್ವ ಇವರ್‍ನ ಕರ್ನಾಟಕ ಘನ ಸರಕಾರ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ ನೇಮಿಸಿ ನಮ್ಮ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯನ ಬೆಳ್ಸುವ ಜವಾಬ್ದಾರಿನ ಇವ್ಕೆ ಕೊಟ್ಟೊಳೊ.

**ಡಾ. ಪೂವಪ್ಪ ಕಣಿಯೂರು**

ವೃತ್ತಿಯಲ್ಲಿ ಪ್ರಾಧ್ಯಾಪಕಾಗಿರುವ ಡಾ. ಪೂವಪ್ಪ ಕಣಿಯೂರು ಮೂಲತಃ ಬೆಳ್ತಂಗಡಿ ತಾಲೂಕಿನ ಕಣಿಯೂರಿನವು. ಎಂ.ಎ., ಪಿ.ಹೆಚ್.ಡಿ ಪದವಿ ಪಡ್ದಿರುವ ಇವು ನೆಹರು ಮೆಮೋರಿಯಲ್ ಕಾಲೇಜು ಸುಳ್ಯಲಿ 29 ವರ್ಷಂದ ವೃತ್ತಿ ಮಾಡಿ ಕೊಂಡೊಳೊ.

ಪ್ರವೃತ್ತಿಯಲ್ಲಿ ಬರಹಗಾರ್, ಜಾನಪದ ಸಂಶೋಧಕರ್, ಸಾಹಿತ್ಯ ವಿಮರ್ಶಕರ್ ಅಲ್ಲದೆ ಯಕ್ಷಗಾನ ಕಲಾವಿದರ್, ರಂಗಭೂಮಿ ಸಂಘಟಕರ್ ಆಗಿ ಗುರುತಿಸಿಕೊಂಡೊವು.

'ಉಲ್ಲಾಕುಳು–ಪ್ರಜಾಪ್ರಭುತ್ವದ ಪ್ರತಿನಿಧೀಕರಣ' ಎಂಬ ಮಹಾಪ್ರಬಂಧಕ್ಕೆ ಮಂಗಳೂರು ವಿ.ವಿಯಿಂದ ಪಿಹೆಚ್.ಡಿ ಪಡ್ದೊಳೊ, ಪೂಕರೆ ಮತ್ತು ಇತರ ಜಾನಪದೀಯ ಲೇಖನಗಳು(2004), ಸುಳ್ಯ ಪರಿಸರದ ನಂಬಿಕೆಗಳು, ಮೌಖಿಕ ಸಂಕಥನ(2009), ಬಂಗ್ಲೆಗುಡ್ಡೆ ಸಣ್ಣಕ್ಕರ ಬಾಯಿ ಪಾತೆರೊದ ಸಾಹಿತ್ಯೊ, ತೀಡಿದಷ್ಟು ಗಂಧ–ವಿಮರ್ಶಾ ಸಂಕಲನ ಇತ್ಯಾದಿ ಕೃತಿಗಳ ಕರ್ತೃ– ಸಂಪಾದಕರಾಗೊಳೊ.

ರಾಷ್ಟ್ರೀಯ ಸೇವಾ ಯೋಜನೆಯ ವಿಶೇಷ ಸೇವೆಗಾಗಿ ಮಂಗಳೂರು ವಿ.ವಿ ಮಟ್ಟದ ಅತ್ಯುತ್ತಮ ಘಟಕಾಧಿಕಾರಿ ಪ್ರಶಸ್ತಿ ಪುರಸ್ಕೃತರ್ ಆಗೊಳೊ.

ಸಂಶೋಧನೆ ಮತ್ತು ಶಿಕ್ಷಣಕ್ಕಾಗಿ ತಾಲೂಕು ಸಾಹಿತ್ಯ ಪರಿಷತ್ತು ಘಟಕದಿಂದ ಸನ್ಮಾನಿತರ್. ಇವರ ಮೌಖಿಕ ಸಂಕಥನ (2009) ಕೃತಿ ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ ಪುಸ್ತಕ ಪ್ರಶಸ್ತಿ ಪಡ್ದ್‌ಟು.

**ಡಾ. ಕೋರನ ಸರಸ್ವತಿ ಪ್ರಕಾಶ್**

ಡಾ. ಕೋರನ ಸರಸ್ವತಿ ಪ್ರಕಾಶ್, ದೀಟಿಗೆ ಕೃಷ್ಣಪ್ಪ–ದೇವಕಿ ದಂಪತಿಗಳ ಸುಪುತ್ರಿ; ಪತಿ ಕೋರನ ಪ್ರಕಾಶ್ ಉತ್ತಯ್ಯ, ಕೊಡಗಿನ ಮೂರ್ನಾಡಿನಲ್ಲಿ ಪ್ರಗತಿಪರ ಕಾಫಿ ಬೆಳೆಗಾರರೆಂದು ಪ್ರಸಿದ್ಧರು.

ಎಂ.ಎ, ಬಿ.ಎಡ್. ಪಿಹೆಚ್.ಡಿ. ಪದವೀದರರಾದ ಡಾ. ಸರಸ್ವತಿಯವರು ಸರಕಾರಿ ಪ್ರಥಮ ದರ್ಜೆ ಕಾಲೇಜು ವಿರಾಜಪೇಟೆ ಇಲ್ಲಿನ ಕನ್ನಡ ವಿಭಾಗದಲ್ಲಿ ಸಹ ಪ್ರಾಧ್ಯಾಪಕರಾಗಿ ಸೇವನಿರತರು. ವಿವಿಧ ರಾಷ್ಟ್ರ ಮಟ್ಟದ, ರಾಜ್ಯ ಮಟ್ಟದ ವಿಚಾರ ಸಂಕಿರಣಗಳಲ್ಲಿ ಪ್ರಬಂಧ ಮಂಡನೆ ಮಾಡಿದ್ದಾರೆ. ಮಡಿಕೇರಿಯ ಆಕಾಶವಾಣಿಯಲ್ಲಿ ಚಿಂತನ, ಕವನ ವಾಚನ ಅಲ್ಲದೆ ವಿವಿಧ ಸಾಹಿತ್ಯ–ಸಾಂಸ್ಕೃತಿಕ ಸಂಘ–ಸಂಸ್ಥೆಗಳಲ್ಲಿ ವಿಶೇಷ ಉಪನ್ಯಾಸಗಳನ್ನು ನೀಡಿದ್ದಾರೆ.

ಕೊಡಗು ಜಿಲ್ಲಾ ದಸರ ಕವಿಗೋಷ್ಠಿ, ಕೊಡವ ಸಾಹಿತ್ಯ ಅಕಾಡೆಮಿಯ ಬಹುಭಾಷಾ ಕವಿಗೋಷ್ಠಿ, ಮಂಗಳೂರಿನ ರಾಣಿ ಅಬ್ಬಕ್ಕ ಉತ್ಸವದಲ್ಲಿ ಅರೆಭಾಷೆ ಕವನ ವಾಚನಗಳನ್ನು

ಮಾಡುವುದರ ಮೂಲಕ ಕೊಡಗಿನ ಗಮನಾರ್ಹ ಕವಿಯೆಂದು ಗುರುತಿಸಿಕೊಂಡಿದ್ದಾರೆ.

'ಕೊಡಗು ಗೌಡ ಸಮುದಾಯ' ಇವರ ಪ್ರಕಟಿತ ಮಹಾಪ್ರಬಂಧ. ಕೊಡಗು ಗೌಡ ಸಂಸ್ಕೃತಿಯ ಕುರಿತು "ಶಕ್ತಿ" ದಿನಪತ್ರಿಕೆಗಳಲ್ಲಿ ಇವರ 66 ಸರಣಿ ಲೇಖನಗಳು ಪ್ರಕಟವಾಗಿವೆ.

ಕೊಡಗು ಗೌಡ ಸಮುದಾಯದ ಸಾಂಸ್ಕೃತಿಕ ಅನನ್ಯತೆ ಮತ್ತು ಚಲನಶೀಲತೆ ಕೃತಿಗೆ ಕೊಡಗಿನ "ಗೌರಮ್ಮ ಪ್ರಶಸ್ತಿ (2010–11)" ಕೊಡಗು ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ (2012) ಪ್ರಶಸ್ತಿಗಳಿಗೆ ಪಾತ್ರರಾಗಿದ್ದಾರೆ.



**ಶ್ರೀ ಮೋಹನ್ ಸೋನ**

ಸುಳ್ಯ ತಾಲೂಕಿನ ಜಾಲ್ಸೂರು ಗ್ರಾಮದ ಸೋಣಂಗೇರಿ ನಡುಮನೆ ಕುಟುಂಬದಲ್ಲಿ ಜನಿಸಿದ ಇವರು ಕರ್ನಾಟಕ ಸರಕಾರದ ಚಿತ್ರಕಲಾ ಪದವಿಯನ್ನು ಪಡೆದು ಜೊತೆಗೆ ಶಿಕ್ಷಕರ ತರಬೇತಿಯನ್ನೂ ಹೊಂದಿ ಕಲಾ ಶಿಕ್ಷಕರಾಗಿ ದುಡಿದು ತರುವಾಯ ಸರಕಾರಿ ಪ್ರಾಥಮಿಕ ಶಾಲೆಯಲ್ಲಿ ಸಹಶಿಕ್ಷಕರಾಗಿ ಸೇವಾ ನಿರತರಾಗಿದ್ದವರು.

1975ರ ದಿನಗಳಲ್ಲಿ ಮಕ್ಕಳ ರಂಗಭೂಮಿಯತ್ತ ಸೆಳೆಯಲ್ಪಟ್ಟು ಶೈಕ್ಷಣಿಕ ಸಾಧ್ಯತೆಗಳಿಗಾಗಿ ಮಕ್ಕಳ ರಂಗಭೂಮಿ ಎಂಬ ಪರಿಕಲ್ಪನೆಯಿಂದ ದುಡಿಯಲಾರಂಭಿಸಿದರು. ಕರ್ನಾಟಕ ರಾಜ್ಯಾದ್ಯಂತ ತಮ್ಮ ಪ್ರಯೋಗ, ಪ್ರಾತ್ಯಕ್ಷಿಕೆಗಳಿಂದ ಮಕ್ಕಳ ಸರ್ವಾಂಗೀಣ ವಿಕಸನದ ಸೂತ್ರವನ್ನು ಪರಿಚಯಿಸಿದರು. ಬಣ್ಣಗಳಿಂದ, ರೇಖೆಗಳಿಂದ ಮಕ್ಕಳ ಅವಲೋಕನ ನಡೆಸಿದರು. ಅವರು ಕೇಂದ್ರ ಸರಕಾರದ ಕೃಷಿ ಸಂಶೋಧನಾ ಸಂಸ್ಥೆಯಲ್ಲಿ ಕಲಾ–ತಾಂತ್ರಿಕ ಅಧಿಕಾರಿಯಾಗಿ 30 ವರ್ಷಗಳ ಸೇವೆಯನ್ನು ಸಲ್ಲಿಸಿ ಇದೀಗ ನಿವೃತ್ತಿಯನ್ನು (2014)ಹೊಂದಿರುತ್ತಾರೆ. ರಾಷ್ಟ್ರೀಯ ಗಮನ ಸೆಳೆದ ಸೋಣಂಗೇರಿ ಬಯಲು ಚಿತ್ರಾಲಯ, ಪುತ್ತೂರಿನಲ್ಲಿ ಡಾ. ಶಿವರಾಮಕಾರಂತರ ಆರ್ಟ್‌ಗ್ಯಾಲರಿ, ಕೊಡಗು ಜಿಲ್ಲಾಡಳಿತ ಕಛೇರಿಯಲ್ಲಿನ ಕೊಡಗು ಸಾಂಸ್ಕೃತಿಕ ಕಲಾಕೃತಿಗಳ ಗ್ಯಾಲರಿ, ಕಾರವಾರದ ಜಿಲ್ಲಾಡಳಿತ ಕಛೇರಿಯಲ್ಲಿನ ಉತ್ತರ ಕನ್ನಡ ಜಿಲ್ಲಾ ಸಾಂಸ್ಕೃತಿಕ ಕಲಾ ಗ್ಯಾಲರಿಗಳ ಸ್ಥಾಪನೆಯಲ್ಲಿ ಪ್ರಮುಖರಾಗಿ ದುಡಿದ ಕ್ರಿಯಾಶೀಲ ವ್ಯಕ್ತಿತ್ವ ಇವರದ್ದಾಗಿದೆ.

ಕಲಾಕೃತಿಗಳ ಮೂಲಕ ಸಾಕ್ಷರ ಆಂದೋಲನ'– ಚಿತ್ರಪಾತ, ಬಣ್ಣದ ಪಯಣ ಕೈಗೊಂಡ ಇವರು ರಾಜ್ಯದ ಗಾಮೀಣ ಪ್ರದೇಶಗಳಲ್ಲಿ ಕಲಾಕೃತಿಗಳ ಪ್ರದರ್ಶನ ನಡೆಸಿ 1800 ಕಿಮೀ ಗಳ ಧೀರ್ಘ ಪ್ರಯಾಣ ನಡೆಸಿದ್ದಾರೆ. ಡಾ.ಶಿವರಾಮ ಕಾರಂತರ ಶೈಕ್ಷಣಿಕ ಚಿಂತನೆಗಳಿಗಾಗಿ ಪುತ್ತೂರಿನ ಬಾಲಭವನದಲ್ಲಿ ಕಳೆದ 6 ವರ್ಷಗಳಿಂದ ಮಕ್ಕಳ ಚಟುವಟಿಕೆಗಳನ್ನು ಹೆಣೆದಿದ್ದಾರೆ. ಭಾರತ ದೇಶಾದ್ಯಂತ ಇವರ ಕಲಾಕೃತಿಗಳು ಸಂಚಾರ ನಡೆಸಿವೆ. ದೇಶೀಯವಾಗಿ ಮತ್ತು ವಿದೇಶೀಯವಾಗಿ ಇವರ ಕಲಾಕೃತಿಗಳು ಖಾಸಗೀ ರಂಗಗಳಲ್ಲಿ ಸಂಗ್ರಹಗೊಂಡಿವೆ.

ಕರ್ನಾಟಕ ರಾಜ್ಯ ನಾಟಕ ಅಕಾಡೆಮಿಯಿಂದ ಪುರಸ್ಕೃತಗೊಂಡ ಇವರು ಹಿರಿಯರ ರಂಗಭೂಮಿ, ನಾಟಕ, ರಂಗವಿನ್ಯಾಸ, ಬೆಳಕು ಹೀಗೆ ಬಹುಬಗೆಯಾಗಿ ಬಹುಮಾನಿತರು. ಮಕ್ಕಳ ನಾಟಕ – ವೈಜ್ಞಾನಿಕ ವಿಚಾರಗಳಿಗಾಗಿ ರಾಷ್ಟ್ರೀಯ ಪುರಸ್ಕಾರವನ್ನೂ ಗಳಿಸಿಕೊಂಡವರು. ನಾಡಿನ ಪ್ರತಿಷ್ಠಿತ ಬರಹಗಾರರ, ಕಥೆಗಾರರ, ಅಂಕಣ ಗಾರರ ಪುಸ್ತಕಗಳಿಗೆ ಆಕಾರ, ವಿನ್ಯಾಸ, ವಿವರಣಾತ್ಮಕ ಚಿತ್ರಗಳನ್ನೂ ರೂಪಿಸಿದ್ದಾರೆ. ವಿವಿಧ ಸಾಂಸ್ಕೃತಿಕ, ವೈಜ್ಞಾನಿಕ ಸಂಶೋಧನ ಗ್ರಂಥಗಳಿಗಾಗಿ ದುಡಿದಿದ್ದಾರೆ. ಸುಳ್ಯ ತಾಲೂಕಿನ ಪ್ರತೀ ಗ್ರಾಮಗಳ ಒಳದಾರಿಗಳಲ್ಲಿ ಕಾಲ್ನಡಿಗೆಯಿಂದ ಸುತ್ತಿ ಬದುಕು–ಸಂಸ್ಕೃತಿ ವಿಚಾರ ವಿವರಗಳನ್ನೂ ದಾಖಲಿಸಿಕೊಂಡಿದ್ದಾರೆ.



**ಶ್ರೀಮತಿ ಸಂಗೀತ ರವಿರಾಜ್**

ಎಂಎ., ಬಿ.ಇಡಿ, [ಅರ್ಥಸಾಸ್ತ್ರ] ಪದವೀಧರೆಯಾದ ಸಂಗೀತ ರವಿರಾಜ್ ಗೃಹಿಣಿ. ಚೆಂಬು ಗ್ರಾಮದ ಹೊಸೂರು ನಿವಾಸಿ. ಇವರ 'ಉಡುಗೊರೆ' ಮತ್ತು 'ನನ್ನೊಡಲ ಮಿಹಿರ' ಎಂಬೆರಡು ಕವನ ಸಂಕಲನಗಳು ಈಗಾಗಲೇ ಲೋಕಾರ್ಪಣೆಯಾಗಿವೆ. ತಾಲೂಕು ಸಾಹಿತ್ಯ ಸಮ್ಮೇಳನಗಳ ಕವಿಗೋಷ್ಠಿಗಳಲ್ಲಿ ಮತ್ತು ಮಡಿಕೇರಿಯಲ್ಲಿ ನಡೆದ 80ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಯುವ ಕವಿಗೋಷ್ಠಿಯಲ್ಲಿ ಭಾಗಿ. ಮಡಿಕೇರಿ ಮತ್ತು ಮಂಗಳೂರು ಆಕಾಶವಾಣಿಗಳಲ್ಲಿ ಕವಿತಾ ವಾಚನ. ವಾರ–ಮಾಸಿಕ ಪತ್ರಿಕೆಗಳಲ್ಲಿ ಹಾಗೆಯೇ ಇಂಟರ್‌ನೆಟ್ ಮತ್ತು ರಾಜ್ಯ ಮಟ್ಟದ ಪತ್ರಿಕೆಗಳಲ್ಲಿ ಇವರ ಕವಿತೆ ಮತ್ತು ಲೇಖನಗಳು ಪ್ರಕಟಗೊಂಡಿವೆ.



**ಯಶವಂತ ಕುಡೆಕಲ್ಲು**

ಶ್ರೀಯುತರು ದಿ| ಕುಡೆಕಲ್ಲು ಪದ್ಮನಾಭ ಮತ್ತು ಶ್ರೀಮತಿ ಶೇಷಮ್ಮ ದಂಪತಿಗಳ ಪುತ್ರರಾಗಿ 1976 ರಲ್ಲಿ ಜನಿಸಿದರು. ಇಂದು ಸುಳ್ಯದ ದುಗ್ಗಲಡ್ಕ ಸಮೀಪವರ್ತಿ ಕುಂಬೆತ್ತಿಬನ ಎಂಬಲ್ಲಿ ವಾಸವಾಗಿರುವ ಯಶವಂತ ಕುಡೆಕಲ್ಲು ತಮ್ಮ ಪದವಿ ಶಿಕ್ಷಣವನ್ನು ನೆಹರು ಮೆಮೋರಿಯಲ್ ಕಾಲೇಜು ಸುಳ್ಯದಲ್ಲಿ ಮುಗಿಸಿದರು. ಆ ಪೂರ್ವದಲ್ಲೆ ತಮ್ಮ ಐ.ಟಿ.ಐ. ಶಿಕ್ಷಣವನ್ನು ಕೆ.ವಿ.ಜಿ. ಐ.ಟಿ.ಐ. ಸುಳ್ಯದಲ್ಲಿ ಮುಗಿಸಿದ ಇವರು ಕೆ.ವಿ.ಜಿ. ಮೆಡಿಕಲ್ ಕಾಲೇಜಿನಲ್ಲಿ ಸಾರ್ವಜನಿಕ ಸಂಪರ್ಕಾಧಿಕಾರಿಯಾಗಿ, ಸುದ್ದಿ ಪತ್ರಿಕೆ ಬೆಂಗಳೂರು–ಇಲ್ಲಿ ಶಾಖಾಧಿಕಾರಿಯಾಗಿ, ಮುಂಬಾಯಿಯ ಅಟೋಮೊಬೈಲ್ ಶೋ ರೂಂ ಒಂದರಲ್ಲಿ ಉದ್ಯೋಗಿಯಾಗಿದ್ದರು. ಇದೀಗ ಸಾವಯವ ಕೃಷಿಯಲ್ಲಿ ಪೂರ್ಣವಾಗಿ ತೊಡಗಿರುವ ಇವರು ಸುಳ್ಯ ಪರಿಸರದಲ್ಲಿ ಎಲ್ಲರಿಗೂ ಚಿರಪರಿಚಿತರು.

ವೃತ್ತಿಯಲ್ಲಿ ಕೃಷಿಕರಾದರೂ ಪ್ರವೃತ್ತಿಯಲ್ಲಿ ಕವಿಯಾಗಿ, ಅದರಲ್ಲೂ ಅರೆಬಾಸೆಯಲ್ಲಿ ಪ್ರಮುಖ ಕವಿಯಾಗಿ ಗುರುತಿಸಿಕೊಂಡವರು. ಈಗಾಗಲೇ 'ತೊಂಬರ', 'ಜೇನೇರಿ' ಎಂಬೆರಡು ಅರೆಭಾಷಾ ಸಾಹಿತ್ಯದಲ್ಲೆ ಗಮನಾರ್ಹ ಕವನ ಸಂಕಲನಗಳನ್ನು ಹೊರ ತಂದಿದ್ದಾರೆ. ಪ್ರಸ್ತುತ ಇವರ ಕವನಗಳು ಮಾಸಪತ್ರಿಕೆ, ವಾರ ಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತಿವೆ.



**ಶ್ರೀ ಬಿ.ಸಿ. ವಸಂತ**

ಶ್ರೀ ಬಿ.ಸಿ. ವಸಂತ ಇವರು ಸುಳ್ಯದ ಕಲ್ಮಕಾರಿನ ಬಾಕಿಲ ಮನೆಯ ಕೆ.ಬಿ. ಚಿನ್ನಪ್ಪ ಗೌಡ ಮತ್ತು ವೇದಾವತಿ ಬಿ.ಸಿ. ದಂಪತಿಗಳ ಮಗನಾಗಿ 1956ರಲ್ಲಿ ಜನಿಸಿದವರು. ಇವರು ತಮ್ಮ ಪಿ.ಯು.ಸಿ. ಶಿಕ್ಷಣವನ್ನು ಎಸ್.ಎಸ್.ಪಿ.ಯು. ಕಾಲೇಜು ಸುಬ್ರಹ್ಮಣ್ಯದಲ್ಲಿ ಪೂರೈಸಿದರು. ಎರಡು ಅವಧಿಗೆ ಕೊಲ್ಲಮೊಗ್ರು ಗ್ರಾ.ಪಂ. ಸದಸ್ಯರಾಗಿ, 2007ರಲ್ಲಿ ಪಂಚಾಯತ್ ಅಧ್ಯಕ್ಷರಾಗಿ ದುಡಿದವರು. ಸಾರ್ವಜನಿಕ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಗುರುತಿಸಿಕೊಂಡವರು. ಗಡಿಕಲ್ಲು ವಿಷ್ಣುಮೂರ್ತಿ ದೇವಸ್ಥಾನದ ಜೀರ್ಣೋದ್ಧಾರ ಸಮಿತಿ ಅಧ್ಯಕ್ಷ, ಕೊಲ್ಲಮೊಗ್ರು ಶ್ರೀ ಅಯ್ಯಪ್ಪ ಸ್ವಾಮಿ ಪೂಜಾ ಮಂದಿರ ಇದರ ಮುಕ್ತೇಸರರಾಗಿ, ಗೌಡ ಯುವ ಸೇವಾ ಸಂಘ (ರಿ) ನಿರ್ದೇಶಕರಾಗಿ ಸೇವಾನಿರತರು. ಜೊತೆಗೆ ಜನಜಾಗೃತಿ ವೇದಿಕೆ, ಸುಳ್ಯ ಇದರಲ್ಲಿ ಸಕ್ರಿಯರಾಗಿದ್ದಾರೆ.



**ಶ್ರೀ ಎಂ.ಬೋಜಪ್ಪ ಗೌಡ**

ದಿ। ಪದ್ಮಯ್ಯ ಗೌಡ ಮತ್ತು ದಿ। ಕೂಸಕ್ಕ ದಂಪತಿಗಳ ಸುಪುತ್ರರಾದ ಎಂ. ಬೋಜಪ್ಪ ಗೌಡ ಇವರು ಮೂಲತಃ ಮಂಡೆಕೋಲಿನ ಮಾವಂಜಿಯವರು. ಪ್ರಕೃತ ಸುಳ್ಯ ತಾಲೂಕಿನ ಉಬರಡ್ಕ ಮಿತ್ತೂರಿನ ಮದುವೆಗದ್ದೆಯಲ್ಲಿ ನೆಲೆಯಾಗಿರುವ ಶ್ರೀಯುತರು ತಮ್ಮ ಪ್ರಾಥಮಿಕ ಶಾಲಾ ಶಿಕ್ಷಣವನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಉಬರಡ್ಕದಲ್ಲಿ ಪೂರೈಸಿದ್ದಾರೆ.

ವೃತ್ತಿಯಲ್ಲಿ ಪ್ರಗತಿಪರ ಕೃಷಿಕರಾಗಿರುವ ಜೊತೆಗೆ ಯುವಕ ಮಂಡಲ ಅಧ್ಯಕ್ಷರಾಗಿ, ಪಂಚಾಯತ್ ಅಧ್ಯಕ್ಷರಾಗಿ, ಸಹಕಾರ ಸಂಘ ಅಧ್ಯಕ್ಷರಾಗಿ, ಗೌಡ ಯುವ ಸಂಘ(ರಿ.) ಸುಳ್ಯದ ಅಧ್ಯಕ್ಷರಾಗಿ, ದ.ಕ.ಜಿಲ್ಲಾ ಪರಿಸರಾಸಕ್ತರ ಸಂಘದ ಅಧ್ಯಕ್ಷರಾಗಿ, ದ.ಕ.ಜಿಲ್ಲೆ ಜೇನು ವ್ಯವಸಾಯ ಸಂಘದ ಉಪಾಧ್ಯಕ್ಷರಾಗಿ, ಉಬರಡ್ಕ ಭಜನಾ ಮಂಡಳಿ ಅಧ್ಯಕ್ಷರಾಗಿ, ಶಾಲಾ ಅಭಿವೃದ್ಧಿ ಸಮಿತಿಯ ಅಧ್ಯಕ್ಷರಾಗಿ, ಯಕ್ಷಗಾನ ಮಂಡಲ ಮತ್ತು ನಾಟಕ ಸಂಘದ ಸ್ಥಾಪಕರಾಗಿ ಹೀಗೆ ರಾಜಕೀಯವಾಗಿ, ಸಾಮಾಜಿಕ ಸೇವಕರಾಗಿ, ಕಲಾ ಸಂಘಟಕರಾಗಿ ಗುರುತಿಸಿಕೊಂಡವರು.

ಶ್ರೀಯುತರು 1982-83ನೇ ಪಂಚಾಯತ್‌ನಲ್ಲಿ ಜಿಲ್ಲಾ ಉತ್ತಮ ಅಧ್ಯಕ್ಷ, 1986ರಲ್ಲಿ ಜಿಲ್ಲಾ ಪೊಲೀಸ್ ಸನ್ಮಾನ, 2007ರಲ್ಲಿ ಉಬರಡ್ಕ ಮಿತ್ತೂರು ಇದರ ಅಮೃತ ಮಹೋತ್ಸವ ಸನ್ಮಾನ, 2007ರಲ್ಲಿ ಗೌಡ ಸಮಾವೇಶ ಸನ್ಮಾನ, 2006ರಲ್ಲಿ ತಾಲೂಕು ಸಾಹಿತ್ಯ ಸಮ್ಮೇಳನ ಸನ್ಮಾನ, ಹೀಗೆ ತಾವು ವಿವಿಧ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಗಳಿಗಾಗಿ ಪ್ರಶಸ್ತಿ ಪುರಸ್ಕೃತರಾಗಿದ್ದಾರೆ. ಸರಳ ವ್ಯಕ್ತಿತ್ವದ ಎಂ. ಬೋಜಪ್ಪ ಗೌಡರು ಸರ್ವರಿಗೂ ಪ್ರಿಯವಾಗುವ ವ್ಯಕ್ತಿತ್ವ.



**ಶ್ರೀ ಸದಾನಂದ ಮಾವಜಿ**

ಸುಳ್ಯ ತಾಲೂಕು ಮಂಡೆಕೋಲು ಗ್ರಾಮದ ಮಾವಜಿ ಮನೆಯ ನಾರಾಯಣ ಗೌಡ ಮತ್ತು ಶ್ರೀಮತಿ ವೆಂಕಮ್ಮ ದಂಪತಿಗಳ ಪುತ್ರರು.

ತಮ್ಮ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣವನ್ನು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಅಜ್ಜಾವರ ಮತ್ತು ಪ್ರೌಢಶಿಕ್ಷಣವನ್ನು ಅಡ್ಪಂಗಾಯ ಅಜ್ಜಾವರದಲ್ಲಿ ಪೂರೈಸಿರುವ ಇವರು ತಮ್ಮ ಕಾನೂನು ಪದವಿಯನ್ನು ಸುಳ್ಯದ ಕೆ.ವಿ.ಜಿ. ಕಾನೂನು ಪದವಿ ಕಾಲೇಜಿನಲ್ಲಿ ಮುಗಿಸಿರುತ್ತಾರೆ.

ಸಹಕಾರಿ ಕ್ಷೇತ್ರದಲ್ಲಿಯೂ ತೊಡಗಿಸಿಕೊಂಡಿರುವ ಇವರು ಮಂಡೆಕೋಲು ಹಾಲು ಉತ್ಪಾದಕರ ಸಹಕಾರಿ ಸಂಘದ ಸ್ಥಾಪಕಾಧ್ಯಕ್ಷರಾಗಿ ಹತ್ತು ವರ್ಷಗಳಿಂದ ಸಂಘವನ್ನು ಮುನ್ನಡೆಸುತ್ತಿದ್ದಾರೆ. ಮಂಡೆಕೋಲು ವ್ಯವಸಾಯ ಸೇವಾ ಸಹಕಾರಿ ಸಂಘ ಇದರ ನಿರ್ದೇಶಕರಾಗಿಯೂ ಸೇವೆ ಸಲ್ಲಿಸಿರುತ್ತಾರೆ. ಗ್ರಾಮ ಪಂಚಾಯತ್ ಮಂಡೆಕೋಲು ಇದರ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಮಂಡೆಕೋಲು ವಿಷ್ಣುಮೂರ್ತಿ ದೇವಸ್ಥಾನದ ಅಧ್ಯಕ್ಷರಾಗಿರುವ ಇವರು ಧಾರ್ಮಿಕವಾಗಿಯೂ ಗುರುತಿಸಿಕೊಂಡಿದ್ದಾರೆ. ಗೌಡರ ಯುವ ಸೇವಾ ಸಂಘ (ರಿ.) ಸುಳ್ಯ ಇದರ ನಿರ್ದೇಶಕರಾಗಿ, ಜತೆ ಕಾರ್ಯದರ್ಶಿಯಾಗಿ ದುಡಿದಿದ್ದಾರೆ. ಈ ಮೂಲಕ ಇವರು ಸಾರ್ವಜನಿಕವಾಗಿ ತಮ್ಮನ್ನು ತೊಡಗಿಸಿ ಕೊಂಡಿದ್ದಾರೆ.



**ಶ್ರೀ ಮಂದ್ರೀರ ಮೋಹನ್‌ದಾಸ್**

ಮಂದ್ರೀರ ಮೊಹನ್‌ದಾಸ್‌ರವರು ಶ್ರೀ ಮಂದ್ರೀರ ಗಣಪತಿ ಮತ್ತು ಬೋಜಮ್ಮ ದಂಪತಿಗಳ ಪುತ್ರರಾಗಿದ್ದು, ಪ್ರಾಥಮಿಕ ಮತ್ತು ಫ್ರೌಢ ಶಿಕ್ಷಣವನ್ನು ಮೂರ್ನಾಡು ಪದವಿ ಪೂರ್ವ ಕಾಲೇಜಿನಲ್ಲಿ ಮುಗಿಸಿ ಪುತ್ತೂರಿನ ವಿವೇಕಾನಂದ ಕಾಲೇಜಿನಲ್ಲಿ ಬಿ.ಕಾಂ ಪದವಿಯನ್ನು ಪಡೆದಿರುತ್ತಾರೆ.

ಪ್ರಸ್ತುತ ಮಡಿಕೇರಿಯಲ್ಲಿ ತೆರಿಗೆ ಸಲಹೆಗಾರರಾಗಿ ವೃತ್ತಿ ನಿರತ ಇವರು ಮರಗೋಡು ಹಾಲು ಉತ್ಪಾದಕರ ಸಹಕಾರ ಸಂಘದ ಸ್ಥಾಪಕರಾಗಿ, ಪ್ರಸ್ತುತ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಮಡಿಕೇರಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧಿಕಾರಿಯಾಗಿ ಸೇವೆ ಸಲ್ಲಿಸಿದ್ದ ಇವರು ಪ್ರಸ್ತುತ ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಸಮಿತಿಯ ಸದಸ್ಯರಾಗಿರುವುದರ ಜೊತೆಗೆ ಗುಡ್ಡೆಮನೆ ಅಪ್ಪಯ್ಯ ಗೌಡ ಸ್ಮಾರಕ ನಿರ್ಮಾಣದ ಮೇಲುಸ್ತುವಾರಿ ಸಮಿತಿಯ ಸದಸ್ಯರಾಗಿಯು ಸೇವೆ ಸಲ್ಲಿಸುತ್ತಿದ್ದಾರೆ.



**ಸಂತೋಷ್, ಕುಡೆಕಲ್**

ಸಹಸದಸ್ಯರು

ಕೊಡಗು ಜಿಲ್ಲಾ ಮಡಿಕೇರಿಯ ಮಕ್ಕಂದೂರು ಗ್ರಾಮದಲ್ಲಿ ನೆಲೆಸಿರುವ ಕುಡೆಕಲ್ಲ್ ಸಂತೋಷ್, ಕುಡೆಕಲ್ ಸುಶೀಲ ಹಾಗೂ ದಿ. ಶಾಂತಪ್ಪ ದಂಪತಿಗಳ ಪುತ್ರ. ಪಿ.ಯು.ಸಿ ವ್ಯಾಸಂಗ ಪೂರೈಸಿರುವ ಇವರು ಐಟಿಐಯಲ್ಲಿ ಎಲೆಕ್ಟ್ರೀಷಿಯನ್ ತರಬೇತಿ ಪಡೆದಿದ್ದಾರೆ. ಕೊಡಗಿನ ಜನಪ್ರಿಯ ಶಕ್ತಿ ಪತ್ರಿಕೆಯಲ್ಲಿ ಪತ್ರಕರ್ತನಾಗಿ ವೃತ್ತಿ ಆರಂಭಿಸಿ ಪ್ರಸ್ತುತ ಹಿರಿಯ ಉಪಸಂಪಾದಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಕೊಡಗು ಜಿಲ್ಲಾ ಪತ್ರಕರ್ತರ ಸಂಘದ ಅತ್ಯುತ್ತಮ ಗ್ರಾಮೀಣ ವರದಿ ಪ್ರಶಸ್ತಿ ಮತ್ತು ಅತ್ಯುತ್ತಮ ಮಾನವೀಯ ವರದಿ ಪ್ರಶಸ್ತಿ, ಕರ್ನಾಟಕ ಸರಕಾರದ ಕರ್ನಾಟಕ ಮಾಧ್ಯಮ ಅಕಾಡೆಮಿ ಪ್ರಶಸ್ತಿ, ಜಿಲ್ಲಾ ಮಟ್ಟದ ಅತ್ಯುತ್ತಮ ಗ್ರಾಮೀಣ ವರದಿ ಪ್ರಶಸ್ತಿ, ರಾಜ್ಯ ಮಟ್ಟದ ಅತ್ಯತ್ತಮ ಸ್ಕೂಪ್ ವರದಿ ಪ್ರಶಸ್ತಿ, ಅತ್ಯುತ್ತಮ ಕ್ರೀಡಾ ವರದಿ ಪ್ರಶಸ್ತಿ, ಅತ್ಯುತ್ತಮ ಛಾಯಚಿತ್ರ ಪ್ರಶಸ್ತಿ, ಕೆ.ಎಸ್.ನ ನೆನಪಿನ ಪ್ರೇಮ ಕವಿ ಪ್ರಶಸ್ತಿ, ಮಂಡ್ಯ ಕನ್ನಡ ಸಾಹಿತ್ಯ ಪರಿಷತ್‌ನಿಂದ ಕಾವ್ಯಶ್ರೀ ಪ್ರಶಸ್ತಿ, ಕೊಡಗು ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ, ಕಾಸರಗೋಡಿನ ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನದಿಂದ ಸಾಂಸ್ಕೃತಿಕ ಪ್ರತಿಷ್ಠಾನ ಪ್ರಶಸ್ತಿ, ಕೊಡಗು ಜಿಲ್ಲಾ ಪತ್ರಕರ್ತರ ಸಂಘದಿಂದ ಅತ್ಯತ್ತಮ ರಾಜಕೀಯ ವರದಿ ಪ್ರಶಸ್ತಿ ಸೇರಿದಂತೆ ಕೆಲವು ಪ್ರಶಸ್ತಿಗಳು ಇವರಿಗೆ ಸಂದಿವೆ.

ಹೆಮ್ಮೆತ್ತಾಳ್ ಗ್ರಾಮದ ಶ್ರೀ ಮಹಾಗಣಪತಿ ಯುವಕ ಸಂಘದ ಸ್ಥಾಪಕ ಉಪಾಧ್ಯಕ್ಷನಾಗಿ, ಕೊಡಗು ಗೌಡ ಯುವ ವೇದಿಕೆಯ ಸ್ಥಾಪಕ ಪ್ರಧಾನ ಕಾರ್ಯದರ್ಶಿಯಾಗಿ, ಹಾಲಿ ನಿರ್ದೇಶಕರಾಗಿ, ಪ್ರಚಾರ ಸಮಿತಿ ಅಧ್ಯಕ್ಷನಾಗಿ, ಅರೆಭಾಷೆ ಅಭಿವೃದ್ಧಿ ಸಮಿತಿ ಪ್ರಧಾನ ಕಾರ್ಯದರ್ಶಿಯಾಗಿ, ಕೊಡಗು ಜಿಲ್ಲಾ ಪತ್ರಕರ್ತರ ಸಂಘದ ಪ್ರಧಾನ ಕಾರ್ಯದರ್ಶಿಯಾಗಿ, ಕೊಡಗು ಜಿಲ್ಲಾ ವುಶು ಸಂಸ್ಥೆ ಉಪಾಧ್ಯಕ್ಷನಾಗಿ ಸೇವೆ ಸಲ್ಲಿಸುತ್ತಿದ್ದಾರೆ.



**ಕಾರ್ಯಪ್ಪ ಪಿ.ಎಸ್.**

ಸಹಸದಸ್ಯರು

1956ರಲ್ಲಿ ಜನಿಸಿರುವ ಕಾರ್ಯಪ್ಪ ಪಿ.ಎಸ್. ಪುಂಡಿಗದ್ದೆ ಇವರು ಸುಳ್ಯ ತಾಲೂಕು ಯೇನೆಕಲ್ ಗ್ರಾಮ ವಾಸಿಗಳಾದ ಪಿ. ಸುಬ್ರಾಯ ಗೌಡ ಮತ್ತು ಪಿ. ದೇವಮ್ಮ ಇವರ ಸುಪುತ್ರರು.

ಯೇನೆಕಲ್ಲಿನ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣ ಪಡೆದಿರುವ ಇವರು ಶ್ರೀ ಕುಕ್ಕೆ ಸುಬ್ರಹ್ಮಣ್ಯೇಶ್ವರ ಕಾಲೇಜಿನಲ್ಲಿ ಪದವಿ ವಿದ್ಯಾಭ್ಯಾಸವನ್ನು ಪೂರೈಸಿರುತ್ತಾರೆ. ಮುಂದೆ ಸಹಕಾರಿ ಡಿಪ್ಲೋಮಾವನ್ನು ಮಡಿಕೇರಿಯಲ್ಲಿ ಮಾಡಿದರು. ಈಗ ಪ್ರಗತಿಪರ ಕೃಷಿಕ.

ಯೇನೆಕಲ್ಲು ಸೇವಾ ಸಹಕಾರಿ ಬ್ಯಾಂಕಿನ ನಿರ್ದೇಶಕರಾಗಿ, ಸುಳ್ಯ ತಾಲೂಕು ಭೂಅಭಿವೃದ್ಧಿ ಬ್ಯಾಂಕ್, ಸುಳ್ಯದ ಎ.ಪಿ.ಎಂ.ಸಿ.ಯ ಅಧ್ಯಕ್ಷ, ಉಪಾಧ್ಯಕ್ಷ, ನಿರ್ದೇಶಕರಾಗಿ, ಉಡುಪಿ–ದಕ್ಷಿಣ ಕನ್ನಡ ಜಿಲ್ಲಾ HOPCOMS ಮಂಗಳೂರು ಇದರ ನಿರ್ದೇಶಕರಾಗಿ, ದ.ಕ.ಜಿಲ್ಲಾ ಮತ್ತು ಕರ್ನಾಟಕ ರಾಜ್ಯ ಜಿಲ್ಲಾ ವೆನಿಲ್ಲಾ ಬೆಳೆಗಾರರ ಸಂಘದ ನಿರ್ದೇಶಕರಾಗಿ, ಸುಳ್ಯ ತಾಲೂಕು ಪಶುಸಂಗೋಪನಾ ಸಹಕಾರಿ ಸಂಘದ ಅಧ್ಯಕ್ಷರಾಗಿ, ಸುಳ್ಯ ತಾಲೂಕು ಕೃಷಿ ಉತ್ಪನ್ನ ಸಹಕಾರಿ ಮಾರಾಟ ಸಂಘದ ಹಾಲಿ ನಿರ್ದೇಶಕರಾಗಿ ಎರಡು ಬಾರಿ ಸುಬ್ರಹ್ಮಣ್ಯ ರೋಟರಿ ಸಂಸ್ಥೆಯ ಅಧ್ಯಕ್ಷರಾಗಿ, ಸುಳ್ಯ ಯುವ ಗೌಡ ಸಮಾಜದ ಯೇನೆಕಲ್ಲು ಗ್ರಾಮ ಸಮಿತಿ ಅಧ್ಯಕ್ಷರಾಗಿ, ಹೀಗೆ ಹತ್ತು ಹಲವು ಸಂಸ್ಥೆಗಳಲ್ಲಿ ತೊಡಗಿಕೊಂಡಿರುವ ಶ್ರೀಯುತರು ಸಹಕಾರಿ ಕ್ಷೇತ್ರದಲ್ಲಿ ತನ್ನದೇ ಆದ ಛಾಪು ಮೂಡಿಸಿದವರು.



**ಶ್ರೀ ಅಣ್ಣಾಜಿ ಗೌಡ ಪೈಲೂರು**

ಸಹಸದಸ್ಯರು

ಶ್ರೀ ಅಣ್ಣಾಜಿ ಗೌಡ ಪೈಲೂರು, ಸುಳ್ಯ ತಾಲೂಕು ಅಮರ ಮುಡ್ನೂರು ಗ್ರಾಮದ ಶ್ರೀ ಸೀತಾರಾಮ ಮತ್ತು ಶ್ರೀಮತಿ ಲಲಿತ ಇವರ ಮಗನಾಗಿ 1956ರಲ್ಲಿ ಜನಿಸಿದವರು. ಪಿ.ಯು.ಸಿ ಶಿಕ್ಷಣವನ್ನು ಪಡೆದಿರುವ ಇವರು ರಾಜಕೀಯ ಕ್ಷೇತ್ರದಲ್ಲಿ ಗುರುತಿಸಿಕೊಂಡವರು. ಜೊತೆಗೆ ಕೃಷಿ ಮತ್ತು ಜೀವ ವಿಮಾ ನಿಗಮದ ಪ್ರತಿನಿಧಿಯಾಗಿ ತೊಡಗಿಸಿಕೊಂಡವರು.

ಗ್ರಾಮ ಪಂಚಾಯತ್ ಸದಸ್ಯರಾಗಿ, ಮಂಡಲ ಪಂಚಾಯತ್ ಸದಸ್ಯರಾಗಿ, ಗ್ರಾಮ ಸಮಿತಿ ಅಧ್ಯಕ್ಷರಾಗಿ, ಶಾಲಾ ಅಭಿವೃದ್ಧಿ ಸಮಿತಿಯ ಅಧ್ಯಕ್ಷರಾಗಿ, ಸುಳ್ಯ ತಾಲೂಕು ಕೃಷಿಕ ಸಮಾಜದ ನಿರ್ದೇಶಕರಾಗಿ ಹೀಗೆ ರಾಜಕೀಯ, ಸಾಮಾಜಿಕ ಸೇವೆಯಲ್ಲಿ ಗುರುತಿಸಿಕೊಂಡವರು.

## ಅಕಾಡೆಮಿ ನಡ್ಸಿದ ಕಾರ್ಯಕ್ರಮಗಳ ವಿವರಗ

1) ದಿನಾಂಕ 08.08.2014 ಅಕಾಡೆಮಿ ಕಚೇರಿಯಲ್ಲಿ ವಿದ್ವಾಂಸರ್ಂದ ವಿಚಾರ ಸಂಕಿರಣ

2) ದಿನಾಂಕ 03.11.2014 ಅಕಾಡೆಮಿ ವೆಬ್‌ಸೈಟ್ ಉದ್ಘಾಟನೆ, ಗಾಂಧಿ ಮೈದಾನ, ಮಡಿಕೇರಿ ಸನ್ಮಾನ್ಯ ಮುಖ್ಯಮಂತ್ರಿಗ ಉದ್ಘಾಟಿಸಿದೊ.

3) ದಿನಾಂಕ 14.12.2014 ಐನ್ ಮನೆ ಸಂಸ್ಕೃತಿ ಜಂಬರ, ಐಕೋಳ ಗ್ರಾಮದ ಕೊಂಪುಳೀರ ಐನ್‌ಮನೆಯಲ್ಲಿ ಹಮ್ಮಿಕೊಂಡಿದ್ದೊ.

4) ದಿನಾಂಕ 27.12.2014 ಸಾಂಸ್ಕೃತಿಕ ಸಮ್ಮೇಲನ, ಕುಶಾಲನಗರ ಗೌಡ ಸಮಾಜದಲ್ಲಿ ಹಮ್ಮಿಕಂಡ್ ಸನ್ಮಾನ್ಯ ಸಚಿವರ್, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಶ್ರೀಮತಿ ಉಮಾಶ್ರಿಯವು ಉದ್ಘಾಟನೆ ಮಾಡ್ದೊ.

5) ದಿನಾಂಕ 22.02.2015 ಸಾಂಸ್ಕೃತಿಕ ಸಮಾವೇಶ, ಕೊಡಗು ಮತ್ತೆ ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರು ಇಲ್ಲಿ ಹಮ್ಮಿಕೊಂಡಿದ್ದೊ.

6) ದಿನಾಂಕ 17.04.2015 ಅರೆಭಾಷೆ ಸಂಸ್ಕೃತಿ ಕುರಿತಾಗಿ ಚಿತ್ರಕಲಾ ಶಿಬಿರ, ಕನಕಮಜಲು ಇಲ್ಲಿ ಕಾರ್ಯಕ್ರಮ ಮಾಡ್ದೊ.

7) ದಿನಾಂಕ 25.07.2015–26.07.2015 ರಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಎಲ್ಲಾ ಅಕಾಡೆಮಿಗ, ಎಲ್ಲಾ ಪುಸ್ತಕ ಪ್ರಾಧಿಕಾರ, ಅಧ್ಯಯನ ಕೇಂದ್ರದ ಅಧೀನಲಿ ಸಂಗಮ ಸಂಭ್ರಮ 2015, ಮಂಗಳೂರು ಪಿಲಿಕುಳ ನಿಸರ್ಗಧಾಮ ಇಲ್ಲಿ ಆಯೋಜಿಸಿದ್ದೊ.

8) ದಿನಾಂಕ 08.08.2015 ಆಟಿ ಹಬ್ಬ ಮರಗೋಡು ಗೌಡ ಸಮಾಜ, ಮರಗೋಡುನಲ್ಲಿ ಹಮ್ಮಿಕೊಂಡಿದ್ದೊ.

9) ದಿನಾಂಕ 09.08.2015 ಆಟಿ ಉತ್ಸವ, ಗೌಡ ಯುವ ಸೇವಾ ಸಂಘ (ರಿ) ಸುಳ್ಯ ಇದರ ಕೋಡಿಯಾಲ್ ಬೈಲ್ ಸಮುದಾಯ ಭವನ ದಲ್ಲಿ ಹಮ್ಮಿಕೊಂಡಿದ್ದೊ.

10) ದಿನಾಂಕ 16.08.2015 ಆಟಿ ಉತ್ಸವ ಸರಕಾರಿ ಪ್ರೌಢಶಾಲೆ, ದುಗ್ಗಲಡ್ಕ, ಸುಳ್ಯ ಹಮ್ಮಿಕೊಂಡಿದ್ದೊ.

11) ದಿನಾಂಕ 16.08.2015 ಆಟಿ ಉತ್ಸವ, ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಪುತ್ಯ, ಮೈಲೆಟ್ಟಿಪಾರೆ, ಮಂಡೆಕೋಲು, ಸುಳ್ಯ ಇಲ್ಲಿ ಹಮ್ಮಿಕೊಂಡಿದ್ದೊ.

# ಅಕಾಡೆಮಿ ಪ್ರಾಯೋಜಿಸಿದ ಕಾರ್ಯಕ್ರಮಗಳು

1) ದಿನಾಂಕ 17.10.2014 ರಂದು ಕೊಡಗು ಜಿಲ್ಲೆಯ ತಲಕಾವೇರಿ ತೀರ್ಥೋದ್ಭವದ ಕಾರ್ಯಕ್ರಮವನ್ನು ರಾಜ್ಯದ ಎಲ್ಲಾ ಬಾನುಲಿ ನಿಲಯಗಳಿಂದ ಪ್ರಚಾರ ಮಾಡುವ ಸಲುವಾಗಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿವತಿಯಿಂದ ಪ್ರಾಯೋಜಕತ್ವ ನೀಡಿದ್ದೊ.
2) ದಿನಾಂಕ 24.10.2014 ಕಾಮಾಕ್ಷಿ ಗೌಡ ಒಕ್ಕೂಟದ ವಾರ್ಷಿಕೋತ್ಸವ ಸಮಾರಂಭಕ್ಕೆ ಮಡಿಕೇರಿ ನಗರದ ಗೌಡ ವಿದ್ಯಾಸಂಘದ ಸಭಾಂಗಣದಲ್ಲಿ ಒಕ್ಕೂಟ ಕಲಾವಿದರ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಪ್ರಾಯೋಜಕತ್ವ.
3) ದಿನಾಂಕ 03.11.2014 ರಂದು ಸನ್ಮಾನ್ಯ ಮುಖ್ಯಮಂತ್ರಿಗಳ ಕಾರ್ಯಕ್ರಮದಲ್ಲಿ ಮಡಿಕೇರಿ ನಗರದ ಗಾಂಧಿ ಮೈದಾನ ಇಲ್ಲಿ ಏರ್ಪಡಿಸಿದ್ದು, ಈ ಕಾರ್ಯಕ್ರಮದಲ್ಲಿ ಕೊಡಗು ಗೌಡ ಯುವ ವೇದಿಕೆ ಇವರ ತಂಡಕ್ಕೆ ಸಾಂಸ್ಕೃತಿಕ ಕಾರ್ಯಕ್ರಮ ಪ್ರಾಯೋಜಕತ್ವ.
4) ದಿನಾಂಕ 29.11.2014 ರಂದು ಮಾಧ್ಯಮ ಅಕಾಡೆಮಿ ಸಹಯೋಗದಲ್ಲಿ ಸಾಂಸ್ಕೃತಿಕ ಪ್ರದರ್ಶನ ಕಾರ್ಯಕ್ರಮವನ್ನು ಮಡಿಕೇರಿ ನಗರದ ಕೋಟೆ ಸಭಾಂಗಣದಲ್ಲಿ ನಡೆಸಿದ್ದು, ಶ್ರೀ ವಿನೋದ್ ಮತ್ತು ಬಳಗದವರಿಂದ ಅರೆಭಾಷೆ ಜಾನಪದ ಕೋಲಾಟ ಮತ್ತು ಕೊಡಗು ಗೌಡ ಯುವ ವೇದಿಕೆ ಇವರ ತಂಡದವರಿಂದ ಅರೆಭಾಷೆ ಸಂಪ್ರದಾಯ ಪ್ರದರ್ಶನ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಪ್ರಾಯೋಜಕತ್ವ .
5) ದಿನಾಂಕ 30.11.2014 ರಂದು ಶ್ರೀ ವಿಜಯ ವಿನಾಯಕ ಗೌಡ ಒಕ್ಕೂಟ ವಾರ್ಷಿಕೋತ್ಸವ ಸಮಾರಂಭಕ್ಕೆ ಮಡಿಕೇರಿ ನಗರದ ಸರಸ್ವತಿ ವಿದ್ಯಾಸಂಸ್ಥೆ ಆವರಣ ಇಲ್ಲಿ ನಡೆದಿದ್ದು ಒಕ್ಕೂಟ ಕಲಾವಿದರ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಪ್ರಾಯೋಜಕತ್ವ.
6) ದಿನಾಂಕ 08.12.2014 ರಂದು ಶ್ರೀ ಓಂಕಾರೇಶ್ವರ ದೇವಸ್ಥಾನ ಸಮಿತಿಯವರು ಕೊಡಗಿನ ಹುತ್ತರಿ ಹಬ್ಬವನ್ನು ಕೋಟೆ ಆವರಣದಲ್ಲಿ ಸಾಂಪ್ರದಾಯಕವಾಗಿ ಅಚರಿಸಿದ್ದು, ಈ ಕಾರ್ಯಕ್ರಮಕ್ಕೆ ಅಕಾಡೆಮಿಯಿಂದ ಕಲಾತಂಡವನ್ನು ಪ್ರಾಯೋಜಿಸಿದ್ದೊ.
7) ದಿನಾಂಕ 13.12.2014 ರಂದು ಬಿ.ಬಾಡಗ ಗ್ರಾಮದ ಹುತ್ತರಿ ಪಂಡ್‌ನವು ಶತಮಾನೋತ್ಸವ ಸಮಾರಂಭ ಬಿ.ಬಾಡಗ ಗ್ರಾಮದ ಹಿರಿಯ ಪ್ರಾಥಮಿಕ ಶಾಲಾ ಆಟದ ಮೈದಾನ ಇಲ್ಲಿ ನಡೆದಿದ್ದು ಹುತ್ತರಿ ಪಂಡ್‌ನ ಕಲಾತಂಡದವರಿಂದ ಸಾಂಪ್ರದಾಯಿಕ ಮೆರವಣಿಗೆ. ಅರೆಭಾಷೆ ಜಾನಪದ ನೃತ್ಯ, ನಾಟಕ, ಸೋಬಾನೆ ಅರೆಭಾಷೆ ಸಂಸ್ಕೃತಿಗೆ ಸಂಬಂಧಿಸಿದಂತೆ ಕಾರ್ಯಕ್ರಮ ಪ್ರಾಯೋಜಿಸಿದ್ದೊ.
8) ದಿನಾಂಕ 15.12.2014 ರಂದು ಕರ್ನಾಟಕ ಜಾನಪದ ಪರಿಷತ್ತು, ಕೇರಳ ಗಡಿನಾಡು ಘಟಕ, ಕಾಸರಗೋಡು ಇವು ಬದಿಯಡ್ಕ ವಿದ್ಯಾಪೀಠ ಇಲ್ಲಿ ಜಾನಪದ

ಕಾರ್ಯಕ್ರಮವನ್ನು ಏರ್ಪಡಿಸಿದ್ದು, ಸದರಿ ಕಾರ್ಯಕ್ರಮದಲ್ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿವತಿಯಿಂದ ಅರೆಭಾಷೆ ಜಾನಪದ ಕೋಲಾಟ ತಂಡವನ್ನು ಪ್ರಾಯೋಜಿಸಿದ್ದೊ.

9) ದಿನಾಂಕ 21.12.2014 ರಂದು ಸುದರ್ಶನ ಗೌಡ ಒಕ್ಕೂಟ ವಾರ್ಷಿಕೋತ್ಸವ ಕಾರ್ಯಕ್ರಮಕ್ಕೆ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಪ್ರಾಯೋಜಕತ್ವ.

10) ದಿನಾಂಕ 14.02.2015 ರಂದು 10ನೇ ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನವು ಚೆಂಬೂ ಗ್ರಾಮದಲ್ಲಿ ನಡೆದಿದ್ದು ಈ ಕಾರ್ಯಕ್ರಮಕ್ಕೆ ಉಪನ್ಯಾಸಕರನ್ನು ಮತ್ತು ಕಲಾತಂಡವನ್ನು ಅಕಾಡೆಮಿಯಿಂದ ಕಳುಹಿಸಿಕೊಟ್ಟೊಳೊ.

11) ದಿನಾಂಕ 28.03.2015 ಮತ್ತು 29.03.2015 ರಂದು ಮಡಿಕೇರಿಯಲ್ಲಿ ಕೊಡಗು ಜಿಲ್ಲಾ ಕಾರ್ಯನಿರತ ಪತ್ರಕರ್ತರ ಸಂಘ(ರಿ) ಇವರು ರಾಜ್ಯಮಟ್ಟದ ಪತ್ರಕರ್ತರ ಟೆನ್ನಿಸ್ ಬಾಲ್ ಕ್ರಿಕೆಟ್ ಪಂದ್ಯಾವಳಿಯನ್ನು ನಡೆಸಿದ್ದು ಈ ಕಾರ್ಯಕ್ರಮದ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಕಲಾತಂಡದವರನ್ನು ಅಕಾಡೆಮಿವತಿಯಿಂದ ಪ್ರಾಯೋಜಿಸಿದ್ದೊ.

12) ದಿನಾಂಕ 25.04.2015 ರಂದು ಕೆದಂಬಾಡಿ ಐನ್‌ಮನೆ ಕುಂದಚೇರಿ ಗ್ರಾಮದಲ್ಲಿ ನಡೆದ ಕೆದಂಬಾಡಿ ಕಪ್–2015 ಟೆನ್ನಿಸ್ ಬಾಲ್ ಕ್ರಿಕೆಟ್ ಪಂದ್ಯಾವಳಿ ಕಾರ್ಯಕ್ರಮದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಅಕಾಡೆಮಿಯಿಂದ ಪ್ರಾಯೋಜನೆ ಕೊಟ್ಟಿದ್ದೊ.

13) ದಿನಾಂಕ 10.05.2015 ರಂದು ಜಿಲ್ಲಾ ಕ್ರೀಡಾಂಗಣ, ಮಡಿಕೇರಿ ಇಲ್ಲಿ ನಡೆದ ಉಳುವಾರನ ಕಪ್ ಕ್ರಿಕೆಟ್ ಜಂಬರ ಕಾರ್ಯಕ್ರಮದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಅಕಾಡೆಮಿಂದ ಪ್ರಾಯೋಜನೆ ನೀಡಿದ್ದೊ.

14) ದಿನಾಂಕ 30.06.2015ರಂದು ನಂಜರಾಯಪಟ್ಟಣ ಸ್ಪೋರ್ಟ್ಸ್ ಕ್ಲಬ್ ನವರು ಗ್ರಾಮೀನ ಕ್ರೀಡಾಕೂಮತ್ತು ಸಾಂಸ್ಕೃತಿಕ ಮಿಲನ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು ಅಕಾಡೆಮಿಯಿಂದ ಪ್ರಾಯೋಜನೆ ನೀಡಿದ್ದೊ.

## ಅಕಾಡೆಮಿಯ ಪ್ರಕಟಣೆಗಳು

| | | |
|---|---|---|
| ಸರ್ಮಾಲೆ | : | ಎಂ.ಜಿ ಕಾವೇರಮ್ಮ |
| ಕುಂಕುಮ | : | ಪೂಜಾರೀರ ಜಿ. ಮಾದಪ್ಪ |
| ಬೇರ್‌ಲಿ ಚಿಗ್‌ರ್ | : | ಬೈತಡ್ಕ ಜಾನಕಿ ಬೆಳ್ಯಪ್ಪ |
| ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ | : | ಎಂ.ಜಿ ಕಾವೇರಮ್ಮ |

## ಲೇಖಕರ ವಿಳಾಸ

1. **ಪ್ರೊ. ಕೆ. ಕುಶಾಲಪ್ಪ ಗೌಡ**
   ಮಾನಸ, ಜಟ್ಟಿಪಳ್ಳ, ಸುಳ್ಯ ದ.ಕ. – 574239
2. **ಯು. ಸುಬ್ರಾಯ ಗೌಡ**
   ಗುತ್ತಿಗಾರು, ಪ್ರಾಚಾರ್ಯರು, ಸ.ಪ.ಪೂ.ಕಾಲೇಜು, ಬೆಳ್ಳಾರೆ –574239
3. **ಸಂಜೀವ ಕುದ್ಪಾಜೆ**
   ಸಹಾಯಕ ಪ್ರಾಧ್ಯಾಪಕರು ನೆಹರು ಮೆಮೋರಿಯಲ್ ಕಾಲೇಜು
   ಸುಳ್ಯ ದ.ಕ.– 574239
4. **ಗೋಪಾಲ್ ಪೆರಾಜೆ**
   ಕೊಳಂಗಾಯ ಮನೆ, ಪೆರಾಜೆ ಅಂಚೆ, ಕೊಡಗು– 574314
5. **ಯಶವಂತ ಕುಡೆಕಲ್ಲು**
   ಕುಂಬೆತ್ತಿ ಬನ, ದುಗ್ಗಲಡ್ಕ, ಸುಳ್ಯ ತಾಲೂಕು ದ.ಕ. – 574239
6. **ಲೋಕೇಶ್ ಕುಂಚಡ್ಕ**
   ಕುಂಚಡ್ಕ ಮನೆ, ಆಲೆಟ್ಟಿ ಸುಳ್ಯ ತಾಲೂಕು ದ.ಕ. – 574239
7. **ಹೊಳೆಕೆರೆ ಆರ್. ಚೆಂಗಪ್ಪ**
   ಕಳತ್ಮಾಡು ಗ್ರಾಮ, ಕೊಡಗು
8. **ಎಂ.ಜಿ. ಕಾವೇರಮ್ಮ**
   ನಿಸರ್ಗ, ಮಾವಜಿ ಸುಳ್ಯ ದ.ಕ. –574239
9. **ಬೈಮನ ಬೋಜಮ್ಮ ಪೊನ್ನಪ್ಪ**
   ಸೌಗಂಧಿಕ ನಿಲಯ, ದಂಡಿನ ಪೇಟೆ, 2ನೇ ವಿಭಾಗ, ಕುಶಾಲನಗರ, ಕೊಡಗು.
10. **ಹೆಚ್.ಆರ್.ಚಂಗಪ್ಪ**
    ನಂ 30, 3ನೇ ಹೆಚ್ ಕ್ರಾಸ್, ರುಕ್ಮಿಣಿ ನಗರ, ನಾಗಸಂದ್ರ ಅಂಚೆ, ಬೆಂಗಳೂರು
11. **ಶ್ರೀ ಕುಲ್ಲಚನ ಕಾರ್ಯಪ್ಪ**
    ನಿವೃತ್ತ ಶಿಕ್ಷಕರು, ಕುಂಬಳದಾಳು ಗ್ರಾಮ ಮತ್ತು ಅಂಚೆ, ಮಡಿಕೇರಿ.
12. **ಶ್ರೀಮತಿ ಬಾರಿಯಂಡ ಭಾರತಿ**
    ಕೋಂ: ಬಾರಿಯಂಡ ಜೋಯಪ್ಪ, ಮದೆ ಗ್ರಾಮ ಮತ್ತು ಅಂಚೆ, ಮಡಿಕೇರಿ
13. **ಭವಾನಿ ಶಂಕರ**
    ಹೊದ್ದೆಟ್ಟಿ, 6ನೇ ವಿಭಾಗ, ವಿದ್ಯಾರಣ್ಯಪುರ, ಬಿ.ಇ.ಎಲ್. ಲೇಔಟ್, ಬೆಂಗಳೂರು
14. **ಕುಡೆಕಲ್ ಸಂತೋಷ್** ಕುಡೆಕಲ್, ಹೆಮ್ಮತ್ತಾಳು ಗ್ರಾಮ, ಮುಕ್ಕಂದೂರು, ಮಡಿಕೇರಿ, ಕೊಡಗು

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ (2014)

**ಸರಕಾರಿ ಅಧಿಸೂಚನೆ ಸಂಖ್ಯೆ: ಕಸಂವಾ 817 ಕಸಧ 2013; ದಿನಾಂಕ 13.08.2014**

**ಅಧ್ಯಕ್ಷರು:**

**ಶ್ರೀ ಕೊಲ್ಯದ ಗಿರೀಶ್,** ಮದೆ ಗ್ರಾಮ, ಮದೆ ಅಂಚೆ, ಮಡಿಕೇರಿ ತಾಲೂಕ್ 571 201
ದೂ: 08272-236515 ಮೊಬೈಲ್ : 9448156599.

**ರಿಜಿಸ್ಟ್ರಾರ್:**

**ಶ್ರೀ ಉಮರಬ್ಬ,** ಎಂ.ಎಂ. ಮಂಜಿಲ್, ಈದಾಯತ್ ನಗರ, ಕೋಟೆಕಾರ್, ಮಂಗಳೂರು,
ಮೊಬೈಲ್ : 9481149135

**ಅರ್ಥ ಸದಸ್ಯರು:**

**ಶ್ರೀ ಎಸ್.ಐ. ಭಾವಿಕಟ್ಟಿ,** ಉಪನಿರ್ದೇಶಕರು, ರಂಗಾಯಣ ಕಲಾಮಂದಿರ ಮೈಸೂರು,
ಮೊಬೈಲ್ : 9972103262

**ಸದಸ್ಯರು :**

**ಡಾ. ಪೂವಪ್ಪ ಕಣಿಯೂರು** ಸ್ಫೂರ್ತಿ 4ನೇ ಅಡ್ಡರಸ್ತೆ, ದಕ್ಷಿಣ ಬೀರಮಂಗಲ, ಚರ್ಚ್ ರೋಡು,
ಸುಳ್ಯ ದ.ಕ. ದೂರವಾಣಿ : 08257-232885/9448984485, pkaniyoor@gmail.com

**ಡಾ. ಕೋರನ ಸರಸ್ವತಿ ಪ್ರಕಾಶ್** ಸಹ ಪ್ರಾಧ್ಯಾಪಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು,
ವಿರಾಜಪೇಟೆ, ಕೊಡಗು ಮೊಬೈಲ್ : 9483826271

**ಶ್ರೀ ಮೋಹನ್ ಸೋನ** ಸೋಣಂಗೇರಿ ನಡುಮನೆ, ಜಾಲ್ಸೂರು, ಸುಳ್ಯ ತಾಲೂಕು
ದ.ಕ.- 574239 ಮೊಬೈಲ್ : 9448791799

**ಶ್ರೀಮತಿ ಸಂಗೀತಾ ರವಿರಾಜ್**
ಹೊಸೂರು ಮನೆ, ಬಾಲೆಂಬಿ ಅಂಚೆ, ಚೆಂಬು, ಮಡಿಕೇರಿ- 574234 ಮೊಬೈಲ್ : 7259135346

**ಶ್ರೀ ಯಶವಂತ ಕುಡೆಕಲ್**
ಕುಂಬೆತ್ತಿ ಬನ, ದುಗ್ಗಲಡ್ಕ, ಸುಳ್ಯ ದ.ಕ. -574239 ಮೊಬೈಲ್ : 9481180519

**ಶ್ರೀ ವಸಂತ ಬಿ.ಸಿ.**
ಬಾಕಿಲ ಮನೆ, ಕಲ್ಮಕಾರು ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9449999354

**ಶ್ರೀ ಬೋಜಪ್ಪ ಗೌಡ ಎಂ.** ಮದುವೆ ಗದ್ದೆ, ಉಬರಡ್ಕ ಮಿತ್ತೂರು, ಸುಳ್ಯ ತಾಲೂಕು
ದ.ಕ.- 574248 ಮೊಬೈಲ್ : 7760782925

**ಶ್ರೀ ಸದಾನಂದ ಗೌಡ ಮಾವಜಿ**
ಮಾವಜಿ, ಮಂಡೆಕೋಲು, ಸುಳ್ಯ ತಾಲೂಕು ದ.ಕ. - 574239 ಮೊಬೈಲ್ : 94481644638

**ಶ್ರೀ ಮೋಹನ್‌ದಾಸ್** ಮಂದ್ರೀರ, ಹೊಸ್ಕೇರಿ ಗ್ರಾಮ, ಮರಗೋಡು, ಮಡಿಕೇರಿ
ಮೊಬೈಲ್ : 9448720112

**ಸಹಸದಸ್ಯರು:**

**ಶ್ರೀ ಕುಡೆಕಲ್ ಸಂತೋಷ್** ಕುಡೆಕಲ್, ಹೆಮ್ಮತ್ತಾಳು ಗ್ರಾಮ, ಮುಕ್ಕಂದೂರು, ಮಡಿಕೇರಿ ತಾಲೂಕು,
ಕೊಡಗು ಮೊಬೈಲ್ : 9972538584, 8762110948

**ಶ್ರೀ ಕಾರ್ಯಪ್ಪ ಪಿ.ಎಸ್.**
ಪುಂಡಿಗದ್ದೆ, ಯೇನೇಕಲ್ ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9731197656

**ಶ್ರೀ ಅಣ್ಣಾಜಿ ಗೌಡ** ಪೈಲೂರು ಮನೆ, ಅಮರಮುಡ್ನೂರು ಗ್ರಾಮ, ಸುಳ್ಯ ತಾಲೂಕು
ದ.ಕ. - 574212 ಮೊಬೈಲ್ : 94488058748/9164401745

## ಹಿಂಗಾರ ತ್ರೈಮಾಸಿಕ ಪತ್ರಿಕೆ ಚಂದಾದಾರನ ತಿಳುವಳ್ಕೆಗೆ

- ಕರ್ನಾಟಕ ಅರಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ ಆಗ್‌ವ 'ಹಿಂಗಾರ' ಪತ್ರಿಕೆನ ನೀವ್ ಎಲ್ಲವು ಸದಸ್ಯರ್ ಆಕು. ಬಿಡಿ ಸಂಚಿಕೆ ಬ್ಯೆಲೆ ರೂ. 20.00, ತ್ರೈವಾರ್ಷಿಕಕೆ ರೂ. 200.00 ಅದೆ.
- ಸದಸ್ಯರ್ ಆದವುಕೆ ಪತ್ರಿಕೆನ ಅಂಚೆಲಿ ಕಳ್ಸುವೆ.
- ನೀವ್ಗ್‌ಳ ಪರಿಚಯಸ್ತರಿಗೆ ಸದಸ್ಯರ್ ಆಕೆ ತಿಳ್ಸೊಕು.
- ಕತೆಗ / ಪದ್ಯಗ / ಚುಟುಕ /ಲೇಖನಗ ಇತಂವುಕ್ಕೆಲ್ಲಾ ಅವಕಾಸ ಉಟ್ಟು.
- ಬರವಣಿಗೆ ಮಾತ್ರ ನಾಲ್ಕ್ ಪುಟಕೆ ಸೀಮಿತ ಇರೊಕು.
- ಪುಟದ ಒಂದು ಬದಿಲಿ ಮಾತ್ರ ಸ್ಪಷ್ಟ ಬರ್ದಿರಕು.
- ಹೆಸರ್ / ವಿಳಾಸ / ದೂರವಾಣಿ ಅಂಕಿಗ ಬರ್ದಿರಕು.


ನಾವ್ಗ್‌ಳ ವಿಳಾಸ :

**ಸಂಪಾದಕರ್**

**ಹಿಂಗಾರ ತ್ರೈಮಾಸಿಕ ಪತ್ರಿಕೆ**

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

1ನೇ ಮಹಡಿ, ರಾಜಾಸೀಟ್ ರಸ್ತೆ, ಮಡಿಕೇರಿ – 571 201, ಕೊಡಗು ಜಿಲ್ಲೆ

ಈಮೇಲ್ : arebaseacademy@gmail.com

ವೆಬ್‌ಸೈಟ್ : www.arebaseacademy.com

ದೂರವಾಣಿ : 08272 - 223055


## ಗಾದೆಗ

- ಸಾಹುಕಾರನ ಊಟ ಕಾಯಿಲೆಗೆ, ಬಡವನ ಊಟ ಆರೋಗ್ಯಕ್ಕೆ.
- ಅಂಬು ಅಟ್ಟಲ ಬಿಲ್ಲ್ ಬೆಟ್ಟಲ.
- ಎತ್ತ್ ಏರಿಗೆಳಯಕಾಕನ ಕೋಣ ನೀರಿಗೆಳ್ದದೆ.
- ಸಾಲ್‌ಲ ಬಂದ ಹಣ ನೀರ್‌ಲ ಹೋದಂಗೆ.
- ಹೇಳ್ದು ಪುರಾಣ ಹಾಕುದು ಗಾಳ.
- ಅಕ್ಕಂಗೆ ಆಳಿಲ್ಲೆ, ಕುಕ್ಕಂಗೆ ಕೂಳಿಲ್ಲೆ.
- ಕುಂಬಳಕಾಯಿ ಕದ್ದಂವ ಹೆಗಲ್ ಮುಟ್ಟಿ ನೋಡ್ತ್‌ಗಡ.




ದಿನಾಂಕ 16.08.2015 ಆಟಿ ಉತ್ಸವ, ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಪುತ್ಯ, ಮಂಡೆಕೋಲು, ಸುಳ್ಯ



ದಿನಾಂಕ 09.08.2015 ಆಟಿ ಉತ್ಸವ, ಗೌಡ ಯುವ ಸೇವಾ ಸಂಘ (ರಿ) ಸುಳ್ಯ



ದಿನಾಂಕ 16.08.2015 ಆಟಿ ಉತ್ಸವ ಸರಕಾರಿ ಪ್ರೌಢಶಾಲೆ, ದುಗ್ಗಲಡ್ಕ, ಸುಳ್ಯ



ದಿನಾಂಕ 14.12.2014 ರಂದು ಕೊಂಪುಳೀರ ಐನ್ ಮನೆ ಸಂಸ್ಕೃತಿ ಜಂಬರ





ಅರೆಭಾಷೆ ಅಕಾಡೆಮಿ ಆಶ್ರಯದಲ್ಲಿ ಆಟಿ ಉತ್ಸವ- ಮಂಡೆಕೋಲು. ಸುಳ್ಯ



ಅರೆಬಾಷೆ ಅಕಾಡೆಮಿಯ ಕನಕಮಜಲು ಕಲಾ ಶಿಬಿರದಲ್ಲಿ ಒಡಮೂಡಿದ ಕಲಾಕೃತಿ